ಶ್ರೀಃ

# ಕುಮಾರಸಂಭವಕಾವ್ಯ

## ಎರಡನೆಯಸರ್ಗವು

### ಶ್ರೀ ಶಾರದಾವ್ಯಾಖ್ಯೈನಮಃ



ಶ್ಲೋ॥ ತಸ್ಮಿನ್ ವಿಪ್ರಕೃತಾಃ ಕಾಲೇ ತಾರಕೇಣ ದಿವೌಕಸಃ ।
ತುರಾಸಾಹಂ ಪುರೋಧಾಯ ಧಾಮ ಸ್ವಾಯಂಭುವಂ ಯಯುಃ॥

ಪದ:—(೧) ತಸ್ಮಿನ್ (೨) ವಿಪ್ರಕೃತಾಃ (೩) ಕಾಲೇ (೪) ತಾರಕೇಣ (೫) ದಿವೌಕಸಃ (೬) ತುರಾಸಾಹಂ (೭) ಪುರೋಧಾಯ (೮) ಧಾಮ (೯) ಸ್ವಾಯಂಭುವಂ (೧೦) ಯಯುಃ

ಶಬ್ದ:—(೧) ದ, ಪು, ಸ, ಏ (೨) ಅ, ಪು, ಪ್ರ, ಬ (೩) ಅ, ಪು, ಸ, ಏ (೪) ಅ, ಪು, ತೃ, ಏ (೫) ಸ, ಪು, ಪ್ರ, ಬ (೬) ಹ.ಪು, ದ್ವಿ, ಏ (೭) ಅವ್ಯ (೮) ನ, ನ, ದ್ವಿ, ಏ (೯) ಅ, ನ, ದ್ವಿ, ಏ (೧೦) ಕ್ರಿ.

ಅನ್ವಯ—ತಸ್ಮಿನ್ ಕಾಲೇ ತಾರಕೇಣ ವಿಪ್ರಕೃತಾಃ ದಿವೌಕಸಃ, ತುರಾಸಾಹಂ ಪುರೋಧಾಯ ಸ್ವಾಯಂಭುವಂ ಧಾಮ ಯಯುಃ.

ಅರ್ಥ—ತಸ್ಮಿನ್-ಆ, ಕಾಲೇ-ಕಾಲದಲ್ಲಿ, ತಾರಕೇಣ-ತಾರಕಾಸುರನಿಂದ, ವಿಪ್ರಕೃತಾಃ - ಬಾಧೆಪಡಿಸಲ್ಪಟ್ಟ, ದಿವೌಕಸಃ-ದೇವತೆಗಳು, ತುರಾಸಾಹಂ-ಇಂದ್ರನನ್ನು, ಪುರೋಧಾಯ-ಮುಂದುಮಾಡಿಕೊಂಡ, ಸ್ವಾಯಂಭುವಂ-ಬ್ರಹ್ಮನ,ಧಾಮ-ಸ್ಥಾನವನ್ನು, ಯಯುಃ ಹೊಂದಿದರು,

ತಾತ್ಪರ್ಯ—ಪಾರ್ವತಿಯು ಪರಮೇಶ್ವರನ ಶುಶ್ರೂಷೆಯನ್ನು ಮಾಡುತ್ತಿರುವ ಕಾಲದಲ್ಲಿಯೇ ವಜ್ರಾಂಗನೆಂಬುವನ ಮಗನಾದ ತಾರಕಾಸುರನೆಂಬ ರಾಕ್ಷಸನ ಹಾವಳಿಯನ್ನು ತಡೆಯಲಾರದೆ ದೇವತೆಗಳೆಲ್ಲರೂ ಇಂದ್ರನನ್ನೊಡಗೊಂಡು ಸತ್ಯಲೋಕದಲ್ಲಿರುವ ಬ್ರಹ್ಮನಬಳಿಗೆ ಬಂದರು.

ಆಕಾಂಕ್ಷೆ—ಯಯುಃ, ಕೇ-ಯಾರು ? ದಿವೌಕಸಃ, ಕಿಂ-ಏನನ್ನು ಕುರಿತು ? ಧಾಮ, (ಸ. ಪ್ರ) ಕಥಂಭೂತಂಧಾಮ ? ಎಂತಹ ಸ್ಥಾನವನ್ನು ? ಸ್ವಾಯಂಭುವಂ, ಕಿಂಕೃತ್ವಾ-ಏನುಮಾಡಿ ? ಪುರೋಧಾಯ, ಕಂ-ಯಾರನ್ನು ? ತುರಾಸಾಹಂ, ಕಥಂಭೂತಾಃ ದಿವೌಕಸಃ-ಎಂ

ಥದೇವತೆಗಳು ? ವಿಪ್ರಕೃತಾಃ, ಕೇನ-ಯಾರಿಂದ ? ತಾರಕೇಣ, ಕದಾ ಯಾವಾಗ ? ಕಾಲೇ, ಕಥಂಭೂತೇಕಾಲೇ-ಎಂಥಕಾಲದಲ್ಲಿ ? ತಸ್ಮಿನ್.

ವಿಗ್ರಹ—(೫) ದಿವಂ ಓಕಃ ಯೇಷಾಂತೇ-ದಿವೌಕಸಃ (ಷ. ಬ. ವ್ರೀ) (೬) ತುರಂ ಸಾಹಯತಿ ಇತಿ-ತುರಾಸಾಹಃ (ಕೃ, ವೃ) + ತಂ.

ಧಾತುರೂಪ—(೧೦) ಯಯೌ, ಯಯತುಃ, ಯಯುಃ
ಯಯಾಥ, ಯಯಿಥ ಯಯಥುಃ, ಯಯ.
ಯಯೌ, ಯಯಿವ, ಯಯಿಮ.

ಧಾತ್ವರ್ಥ—(ಯಾ-ಪ್ರಾಪಣೇ) ಹೋಗುವಿಕೆ, ಎಂಬರ್ಥವುಳ್ಳ, ಅದಾದಿ, ಎರಡನೆಯ ಗಣ, ಪರಸ್ಮೈಪದಿ, ಯಾ, ಎಂಬ ಧಾತುವು 'ಲಿಟ್'' ಲಕಾರದ ಪ್ರಥಮಪುರುಷ ಬಹುವಚನರೂಪದಲ್ಲಿದೆ.

ವಿಶೇಷ—(೫) ದಿವ-ಸ್ವರ್ಗವು, ಓಕಃ-ಸ್ಥಾನವು ಯಾರಿಗೋ ಅವರು (ಅವ, ಅರ್ಥ) ದ್ಯು ಶಬ್ದವು-ಸ್ವರ್ಗ, ಆಕಾಶ, ಇವೆರಡರ್ಥದಲ್ಲಿಯೂ ಉಂಟು. ದ್ಯೌಃಓಕಃ ಯೇಷಾಂತೇ ಎಂದು ವಿಗ್ರಹವನ್ನು ಮಾಡಿದಾಗ-ದ್ಯೌಃ + ಓಕಃ= ದಿವೌಕಸಃ, ಪೃಷೋದರಾದಿಗಣದಲ್ಲಿ ಸೇರಿಸುವುದರಿಂದ ರೂಪವಾಗುವುದು (೬) ತುರ - ಜಾಗ್ರತೆಯಾಗಿ, ಸಾಹಯತಿ-ಸೋಲಿಸುತ್ತಾನೆ (ಅವ, ಅ) ತುರ + ಸಾಹ್ + ಕ್ವಿಪ್ (ಲೋಪ)= ತುರಾಷಾಟ್, ಕ್ವಿಪ್, ಪ್ರತ್ಯಯವು ಪರವಾಗಿರುವುದರಿಂದ ಪೂರ್ವಶಬ್ದಾಂತಸ್ವರಕ್ಕೆ ದೀರ್ಘಾದೇಶವು ಬಂತು. ಮುಗ್ಧಬೋಧವ್ಯಾಕರಣಕಾರನು ಟಾಬಂತವಾದ (ಆಕಾರಾಂತ) ತುರಾಶಬ್ದವೊಂದುಂಟೆಂದು ಹೇಳಿದ್ದಾನೆ ಸಹ, ಧಾತುವು ಚುರಾದಿಗಣದಲ್ಲಿ ಸೇರಿದೆ. ಆದ್ದರಿಂದ ಧಾತುವಿನ ಉಪಾಂತಸ್ವರಕ್ಕೆ ದೀರ್ಘಾದೇಶಬಂದಿದೆ. ಈ ಸಹ ಧಾತುವು ಹಲಾದಿ ಪ್ರತ್ಯಯವು (ವ್ಯಂಜನಾದಿ) ಪರವಾದಾಗ 'ಸಾಡ್' ಎಂಬ ರೂಪವನ್ನು ಹೊಂದುತ್ತದೆ. ಸಾಡ್ ರೂಪವನ್ನು ಹೊಂದಿದ ಸಹ ಧಾತುವಿನ ಸಕಾರಮೂರ್ಧನ್ಯಾದೇಶವು (ಷ) ಬರುವುದು. ಇಲ್ಲಿ ದ್ವಿತೀಯೈಕವಚನಪ್ರತ್ಯಯವು 'ಅಮ್' ಎಂಬ ಅಜಾದಿ (ಸ್ವರಾದಿ) ಪ್ರತ್ಯಯವಾದುದರಿಂದ ಸಾಡ್ ಎಂಬ ರೂಪವೂ, ಷಕಾರಾದೇಶವೂ ಬರಲಿಲ್ಲ (೭) ಪುರಃ + ಧಾ + ಯ, ಲ್ಯಪ್ ಪ್ರತ್ಯಯಾಂತಾವ್ಯಯ (ಗ) ಸ್ವಾಯಂಭವ

ಶೀತಿ-ಸ್ವಯಂಭೂಃ (ತಾನೇ ಹುಟ್ಟಿದವನು ಅಂದರೆ ಅಯೋನಿಜನು) ಸ್ವಯಂಭುವಃ ಇದಂ-ಸ್ವಾಯಂಭುವಂ ಇದು ಅವನದಾಗಿದೆ ಎಂಬ ರ್ಥದಲ್ಲಿ "ಅಣ್" ಎಂಬ ತದ್ಧಿತಪ್ರತ್ಯಯವು ಬಂತು. ಣ್, ಎಂಬುದು ಶೋಪವಾಗತಕ್ಕ ಪ್ರತ್ಯಯವಾದುದರಿಂದ ಆದಿ ದೀರ್ಘವೂ ಬಂತು. ಸ್ವಯಂಭೂ + ಅ + ಅಮ್= ಸ್ವಾಯಂಭುವಂ, ಇಲ್ಲಿ ದ್ವಿತೀಯೈಕವ ಚನಪ್ರತ್ಯಯವು ಪರವಾದಾಗ "ಅಣ್" ಪ್ರತ್ಯಯಾಂತವಾದ ಸ್ವಯಂ ಭೂ ಶಬ್ದಕ್ಕೆ "ಭ" ಸಂಜ್ಞೆ ಬಂದರೂ, ಭ ಸಂಜ್ಞೆಯನ್ನೇ ನಿಮಿತ್ತ ಮಾಡಿಕೊಂಡು ಊಕಾರಕ್ಕೆ ಗುಣವು ಬರಬೇಕಾಗಿರುವುದರಿಂದ ಸಂ ಜ್ಞಾನಿಮಿತ್ತ ಕಾರ್ಯವು ಅನಿತ್ಯವೆಂಬ ನ್ಯಾಯಾನುಸಾರವಾಗಿ ಸ್ವಯಂ + ಭೋ + ಅಂ= ಸ್ವಾಯಂಭವಂ, ಎಂದು ಗುಣವೂ, ಅವಾದೇಶವೂ ಬರ ಲಿಲ್ಲ. ಈ ಶ್ಲೋಕವು ಅನುಷ್ಟುಪ್ ಎಂಬ ಎಂಟನೆಯ ಛಂದಸ್ಸಿನಲ್ಲಿ ೮ ಅಕ್ಷರಪಾದಗಳುಳ್ಳದ್ದಾಗಿ ಹುಟ್ಟಿರುವುದು. ಇದಕ್ಕೆ ಅನುಷ್ಟುಪ್ ಎಂತಲೂ, ಶ್ಲೋಕವೃತ್ತವೆಂತಲೂ ಹೆಸರು. ಈ ವೃತ್ತದ ನಾಲ್ಕುಪಾ ದಗಳಲ್ಲಿಯೂ ಐದನೆಯ ಅಕ್ಷರವೂ ಎರಡು ನಾಲ್ಕನೆಯ ಪಾದಗಳ ಏ ಳನೆಯ ಅಕ್ಷರವೂ, ಲಘುವಾಗಿರಬೇಕು. ಎಲ್ಲಾ ಪಾದಗಳಲ್ಲಿಯೂ ಆರ ನೆಯವರ್ಣವು ಗುರುವಾಗಿರಬೇಕು ಎಂಬುದು ಲಕ್ಷಣವು. ಶ್ಲೋ || ಪಂಚಮಂಲಘುಸರ್ವತ್ರ ಸಪ್ತಮಂದ್ವಿಚತುರ್ಥಯೋಃ । ಷಷ್ಠಂಗುರು ವಿಜಾನೀಯಾ ದೇತಚ್ಛ್ಲೋಕಸ್ಯಲಕ್ಷಣಂ || ಎಂದು ಛಂದಶ್ಶಾಸ್ತ್ರದಲ್ಲಿ ಲಕ್ಷಣವನ್ನು ಹೇಳಿದ್ದಾರೆ. ಈ ಸರ್ಗವು ಪೂರಯಿಸುವವರೆಗೂ ಇದೇ ವೃತ್ತವೆಂದು ತಿಳಿಯಬೇಕು. ||೧||

ಶ್ಲೋ|| ತೇಷಾಮಾವಿರಭೂದ್ಬ್ರಹ್ಮಾ ಪರಿಮ್ಲಾನ ಮುಖಶ್ರಿಯಾಂ ।
ಸರಸಾಂ ಸುಪ್ತಪದ್ಮಾನಾಂ ಪ್ರಾತರ್ದೀಧಿತಿಮಾನಿವ ||೨||

ಪದ— (೧) ತೇಷಾಂ (೨) ಆವಿರಭೂತ್ (೩) ಬ್ರಹ್ಮಾ (೪) ಪರಿಮ್ಲಾನಮುಖಶ್ರಿಯಾಂ (೫) ಸರಸಾಂ (೬) ಸುಪ್ತಪದ್ಮಾನಾಂ (೭) ಪ್ರಾತಃ (೮) ದೀಧಿತಿಮಾನ್ (೯) ಇವ.

ಶಬ್ದ—(೧) ದ, ಪು, ಷ, ಬ, (೨) ಕ್ರಿ (೩) ನ, ಪು, ಪ್ರ ಏ [೪] ಈ, ಪು, ಷ, ಬ. (೫) ಸ, ನ, ಷ, ಬ (೬) ಅ, ನ, ಷ, ಬ,

(೩, ೯) ಅವ್ಯ (೪) ತ, ಪು, ಪ್ರ, ಏ.

ಅನ್ವಯ—ಬ್ರಹ್ಮಾ ಪರಿಮ್ಲಾನಮುಖಶ್ರಿಯಾಂ ತೇಷಾಂ, ಸುಪ್ತ ಪದ್ಮಾನಾಂ ಸರಸಾಂ ಪ್ರಾತಃ ದೀಧಿತಿಮಾನ್ ಇವ, ಆವಿರಭೂತ್.

ಅರ್ಥ—ಬ್ರಹ್ಮಾ-ಬ್ರಹ್ಮನು, ಪರಿಮ್ಲಾನ-ಬಾಡಿದ, ಮುಖ-ಮುಖಗಳ, ಶ್ರಿಯಾಂ-ಕಾಂತಿಯುಳ್ಳ, ತೇಷಾಂ-ಆ ದೇವತೆಗಳಿಗೆ, ಸುಪ್ತ-ಮಲಗಿರುವ (ಮುಕುಳಿತವಾದ), ಪದ್ಮಾನಾಂ-ಕಮಲಗಳುಳ್ಳ, ಸರಸಾಂ-ಸರೋವರಗಳಿಗೆ, ಪ್ರಾತಃ-ಪ್ರಾತಃಕಾಲದಲ್ಲಿ, ದೀಧಿತಿಮಾನಿವ-ಸೂರ್ಯನಂತೆ, ಆವಿರಭೂತ್-ಕಾಣಿಸಿದನು.

ತಾತ್ಪರ್ಯ—ತಾರಕನ ಬಾಧೆಯಿಂದುಂಟಾದ ಕೊರತೆಯಿಂದ ಬಾಡಿ ಕಳೆಗುಂದಿದ ಮುಖವುಳ್ಳ ಇಂದ್ರಾದಿದೇವತೆಗಳಿಗೆ, ರಾತ್ರಿಯಲ್ಲಿ ತಮ್ಮ ಮಿತ್ರನಾದ ಸೂರ್ಯನದರ್ಶನವಿಲ್ಲದುದರಿಂದ ಬಾಡಿ ಮುಗಿದಿರುವ ಕಮಲವನಕ್ಕೆ ಸೂರ್ಯನು ಪ್ರಾತಃಕಾಲದಲ್ಲಿ ಕಾಣಿಸಿಕೊಳ್ಳುವಂತೆ ಬ್ರಹ್ಮನು ಪ್ರಕಾಶಿಸಿದನು. ಅಂದರೆ ಸೂರ್ಯೋದಯದಿಂದ ವಿಕಸಿತಗಳಾಗಿ ರಮ್ಯವಾಗಿರುವ ಕಮಲಗಳಂತೆ ಬ್ರಹ್ಮನ ದರ್ಶನದಿಂದ ದೇವತೆಗಳ ಮುಖವು ಹರ್ಷೋನ್ಮುಖವಾಯ್ತೆಂದು ಭಾವವು.

ಆಕಾಂಕ್ಷೆ—ಆವಿರಭೂತ್, ಕಃ-ಯಾರು? ಬ್ರಹ್ಮಾ (ಅ. ಪ್ರ) ಕೇಷಾಂ-ಯಾರಿಗೆ ? ತೇಷಾಂ, ಕಥಂಭೂತಾನಾಂ-ಎಂಥ ಆ ದೇವತೆಗಳಿಗೆ ? ಪರಿಮ್ಲಾನ ಮುಖಶ್ರಿಯಾಂ, ಕ ಇವ-ಯಾರಂತೆ ? ದೀಧಿತಿಮಾನಿವ, ಕೇಷಾಂ - ಯಾವವುಗಳಿಗೆ, ಸರಸಾಂ, ಕಥಂಭೂತಾನಾಂ ಸರಸಾಂ-ಎಂಥಸರಸ್ಸುಗಳಿಗೆ ? ಸುಪ್ತಪದ್ಮಾನಾಂ, ಕದಾ-ಯಾವಾಗ? ಪ್ರಾತಃ.

ವಿಗ್ರಹ— (೪) ಮುಖಾನಾಂಶ್ರೀಃ-ಮುಖಶ್ರೀಃ (ಷ. ತ) ಪರಿಮ್ಲಾನಾ ಮುಖಶ್ರೀಃ ಯೇಷಾಂತೇ ಪರಿಮ್ಲಾನಮುಖಶ್ರಿಯಃ (ಷ, ಬ, ವ್ರೀ) + ತೇಷಾಂ, (೬) ಸುಪ್ತಾನಿ ಪದ್ಮಾನಿ ಯೇಷುತಾನಿ-ಸುಪ್ತಪದ್ಮಾನಿ (ಸ, ಬ, ವ್ರೀ) + ತೇಷಾಂ,

ಧಾತುರೂಪ—(೨) ಆವಿರಭೂತ್, ಆವಿರಭೂತಾಂ, ಆವಿರಭೂವನ್
ಆವಿರಭೂಃ, ಆವಿರಭೂತಂ, ಆವಿರಭೂತ,
ಆವಿರಭೂವಂ ಆವಿರಭೂವ, ಆವಿರಭೂಮ,

ಧಾತ್ವರ್ಥ:—(ಭೂ-ಸತ್ತಾಯಾಂ) ಇರುವಿಕೆ, ಆಗುವಿಕೆ, ಎಂಬರ್ಥವುಳ್ಳ ಭ್ವಾದಿ, ಒಂದನೆಯ ಗಣ, ಪರಸ್ಮೈಪದಿ, ಭೂ ಎಂಬ ಧಾತುವಿಗೆ 'ಆವಿಃ' ಎಂಬ ಪೂರ್ವಪದವು (ಅವ್ಯ] ಸೇರಿ ಕಾಣಿಸಿಕೊಳ್ಳುವಿಕೆ ಎಂಬರ್ಥವುಳ್ಳುದಾಗಿ 'ಲುಙ್', ಲಕಾರದ ಭೂತಕಾಲದ ಪ್ರ, ಏ.

ವಿಶೇಷ:—(೨)ಆವಿಃ, ಪ್ರಾದುಃ, ಇವೆರಡೂ ಪ್ರಕಾಶಾರ್ಥಗಳು. (೮) ದೀಧಿತಯಃ ಅಸ್ಯ ಸಂತಿ ಇತಿ-ದೀಧಿತಿಮಾನ್, (ಕಿರಣಗಳುಳ್ಳವನು.) ಅದು ಇವನಿಗುಂಟೆಂಬರ್ಥದಲ್ಲಿ ಮತುಪ್,ಪ್ರತ್ಯಯವು ಬಂತು (ತವ್ರ) ಕಿರಣಃ, ಉಸ್ರಃ, ಮಯೂಖಃ, ಭಾನುಃ, ಕರಃ, ಮರೀಚಿಃ, ದೀಧಿತಿಃ, ಅಂಶುಃ, ಗಭಸ್ತಿಃ ಘೃಣಿಃ, ಘೃಷ್ಟಿಃ, ಪ್ರಭಾ, ರುಕ್, ರುಚಿಃ ತ್ವಿಟ್, ಭಾ, ಭಾಃ, ಛವಿಃ, ದ್ಯುತಿಃ, ದೀಪ್ತಿಃ, ರೋಚಿಃ, ಶೋಚಿಃ ಪ್ರಕಾಶಃ, ದ್ಯೋತಃ, ಆತಪಃ, ಗೌಃ, ಅರ್ಚಿಃ, ತೇಜಃ, ಧಾಮ, ಮಹಃ, ವಿಭಾ, ಇವು ಏಕಾರ್ಥಕಪದಗಳು, ಈ ಶ್ಲೋಕದಲ್ಲಿ ಬ್ರಹ್ಮನು ಸೂರ್ಯನಂತೆ ಪ್ರಕಾಶಿಸಿದನು, ಎಂಬ ವಾಕ್ಯಾರ್ಥವಿರುವುದು, ಬ್ರಹ್ಮನೆಂಬ ಉಪಮೇಯವೂ, ಸೂರ್ಯನೆಂಬುಪಮಾನವೂ, ಇವ ಎಂಬ ವಾಚಕ ಶಬ್ದವೂ, ಆವಿರ್ಭವನ ವೆಂಬ ಸಾಮಾನ್ಯ ಧರ್ಮವೂ ವರ್ಣಿತವಾಗಿರುವುದರಿಂದ ಪೂರ್ಣೋಪಮಾಲಂಕಾರವು ॥೨॥

ಶ್ಲೋ॥ ಅಥ ಸರ್ವಸ್ಯ ಧಾತಾರಂ ತೇ ಸರ್ವೇ ಸರ್ವತೋಮುಖಂ ।
ವಾಗೀಶಂ ವಾಗ್ಭಿರರ್ಥ್ಯಾಭಿಃ ಪ್ರಣಿಪತ್ಯೋಪತಸ್ಥಿರೇ ॥೩॥

ಪದ:—(೧) ಅಥ (೨) ಸರ್ವಸ್ಯ (೩) ಧಾತಾರಂ (೪) ತೇ (೫) ಸರ್ವೇ (೬) ಸರ್ವತೋಮುಖಂ (೭) ವಾಗೀಶಂ (೮) ವಾಗ್ಭಿಃ (೯) ಅರ್ಥ್ಯಾಭಿಃ (೧೦) ಪ್ರಣಿಪತ್ಯ (೧೧) ಉಪತಸ್ಥಿರೇ.

ಶಬ್ದ:—(೧, ೧೦) ಅವ್ಯ, (೩) ಋ, ಪು, ದ್ವಿ, ಏ (೪) ದ, ಪು, ಪ್ರ, ಬ (೫) ಅ, ಪು, ಪ್ರ, ಬ, (೬-೭) ಅ, ಪು, ದ್ವಿ, ಏ (೮) ಚ, ಸ್ತ್ರೀ, ತೃ. ಬ (೯) ಆ, ಸ್ತ್ರೀ, ತೃ, ಬ, (೧೧) ಕ್ರಿ.

ಅನ್ವಯ:—ಅಥ ಸರ್ವೇತೇ ಸರ್ವಸ್ಯ ಧಾತಾರಂ ಸರ್ವತೋ ಮುಖಂ ವಾಗೀಶಂ ಪ್ರಣಿಪತ್ಯ, ಅರ್ಥ್ಯಾಭಿಃ ವಾಗ್ಭಿಃ ಉಪತಸ್ಥಿರೇ.

ಅರ್ಥ:—ಅಥ-ಅನಂತರದಲ್ಲಿ, ಸರ್ವೇ-ಸಮಸ್ತರಾದ, ತೇ-ಅವರ

(ದೇವತೆಗಳು) ಸರ್ವಸ್ಯ- ಪ್ರಪಂಚಕ್ಕೆ, ಧಾತಾರಂ-ಸೃಷ್ಟಿಕರ್ತನಾದ, ಸರ್ವತೋಮುಖಂ-ಚತುರ್ಮುಖನಾದ, ವಾಕ್-ವಿದ್ಯೆಗಳಿಗೆ, ಈಶಂ-ಒಡೆಯನಾದ ಬ್ರಹ್ಮನನ್ನು, ಪ್ರಣಿಪತ್ಯ-ನಮಸ್ಕರಿಸಿ, ಅರ್ಥ್ಯಾಭಿಃ-ಸಾರ್ಥಕಗಳಾದ, ವಾಗ್ಭಿಃ-ಮಾತುಗಳಿಂದ, ಉಪತಸ್ಥಿರೇ-ಹೊಗಳಿದರು.

ತಾತ್ಪರ್ಯ:—ಬ್ರಹ್ಮದರ್ಶನಾನಂತರದಲ್ಲಿ ದೇವತೆಗಳೆಲ್ಲರೂ, ಲೋಕನಿರ್ಮಾಣಕರ್ತನು, ವಿದ್ಯಾಧಿಪತಿಯು, ಚತುರ್ಮುಖನೂ ಆಗಿರುವ ಆ ಬ್ರಹ್ಮನನ್ನು ಯುಕ್ತವಾದ ಸ್ತೋತ್ರವಚನಗಳಿಂದಹೊಗಳಿದರು.

ಆಕಾಂಕ್ಷೆ:—ಉಪತಸ್ಥಿರೇ, ಕೇ-ಯಾರು ? ತೇ, ಕಂ-ಯಾರನ್ನು ? ವಾಗೀಶಂ (ಸ. ಪ್ರ) ಕಾಭಿಃ-ಯಾವವುಗಳಿಂದ ? ವಾಗ್ಭಿಃ, ಕಥಂಭೂತಾಭಿಃವಾಗ್ಭಿಃ—ಎಂತಹ ವಾಕ್ಕುಗಳಿಂದ ?, ಅರ್ಥ್ಯಾಭಿಃ. ಕಿಂಕೃತ್ವಾ-ಏನಮಾಡಿ ! ಪ್ರಣಿಪತ್ಯ, ಕಥಂಭೂತಾಃ ತೇ-ಎಂತಹ ಅವರು ? ಸರ್ವೇ, ಕಥಂಭೂತಂ ವಾಗೀಶಂ—ಎಂತಹ ಬ್ರಹ್ಮನನ್ನು ? ಸರ್ವತೋಮುಖಂ ಪುನಃ ಕಥಂಭೂತಂ ವಾಗೀಶಂ ? ಧಾತಾರಂ, ಕಸ್ಯ - ಯಾವುದಕ್ಕೆ ? ಸರ್ವಸ್ಯ, ಕದಾ-ಯಾವಾಗ ? ಅಥ

ವಿಗ್ರಹ:—(೧ ಸರ್ವತಃ ಮುಖಾನಿ ಯಸ್ಯಸಃ-ಸರ್ವತೋಮುಖಃ (ಷ. ಬ. ವ್ರೀ) + ತಂ, (೨) ವಾಚಾಂ ಈಶಃ-ವಾಗೀಶಃ (ಷ. ತ) + ತಂ

ಧಾತುರೂಪ:—(೧೧) ಉಪತಸ್ಥೇ, ಉಪತಸ್ಥಾತೇ, ಉಪತಸ್ಥಿರೇ,
ಉಪತಸ್ಥಿಷೇ, ಉಪತಸ್ಥಾಥೇ, ಉಪತಸ್ಥಿಧ್ವೇ,
ಉಪತಸ್ಥೇ, ಉಪತಸ್ಥಿವಹೇ, ಉಪತಸ್ಥಿಮಹೇ,

ಧಾತ್ವರ್ಥ:— (ಷ್ಠಾ-ಗತಿನಿವೃತ್ತೌ) ನಿಲ್ಲುವಿಕೆ, ಎಂಬರ್ಥವುಳ್ಳ ಭ್ವಾದಿ, ಒಂದನೆಯ ಗಣ ಅಕರ್ಮಕ, ಪರಸ್ಮೈಪದಿ 'ಷ್ಠಾ' ಎಂಬಧಾತುವು 'ಉಪ' ಎಂಬ ಉಪಸರ್ಗವು ಕೂಡಿದ್ದರಿಂದ ಸ್ತುತಿಸುವಿಕೆ ಎಂಬರ್ಥವುಳ್ಳದ್ದಾಗಿ ಆತ್ಮನೇ ಪದದ 'ಲಿಟ್' ಲಕಾರದ ಭೂತಕಾಲ ಪ್ರ. ಪ.

ವಿಶೇಷ:—(೧) ಸರ್ವತಃ, ಇಲ್ಲಿ ಸಪ್ತಮ್ಯರ್ಥದಲ್ಲಿ 'ತಸಿಲ್' ಪ್ರತ್ಯಯವು ಬಂದಿದೆ. ಎಲ್ಲದಿಕ್ಕುಗಳಲ್ಲಿಯೂ (ನಾಲ್ಕುದಿಕ್ಕುಗಳಲ್ಲಿಯೂ) ಮುಖಗಳುಳ್ಳವನೆಂದು ತಾತ್ಪರ್ಯವು. (೨) ವಾಕ್-ವಿದ್ಯೆ ಅಥವಾ ಸರಸ್ವತಿಗೆ, ಈಶಃ-ಪತಿಯು, (೩) ಅರ್ಥಾದನಪೇತಾಃ '-ಅರ್ಥ್ಯಾಃ-(ಅರ್ಥರ

ಹಿತವಲ್ಲದುವು) ಬಿಡಲ್ಪಡದ್ದು, ಎಂಬರ್ಥದಲ್ಲಿ 'ಯತ'' ಪ್ರತ್ಯಯುವು ಬಂದಿದೆ. (ತ.ವೃ) + ತಾಭಿಃ, ಇದೇ ಅರ್ಥದಲ್ಲಿ ಧರ್ಮ, ಪಥಿ, ನ್ಯಾಯ ಈ ಶಬ್ದಗಳ ಮೇಲೆಯೂ, ‹ಯತ್' ಪ್ರತ್ಯಯುವು ಬರುವುದು(೧೦) ಪ್ರ + ನಿ + ಪತ್ + ಯ= ಪ್ರಣಿಪತ್ಯ, ಪ್ರ, ನಿ, ಎಂಬ ಉಪಸರ್ಗಗಳೊಡನಿರುವ ‹ಪತ'' ಧಾತುವಿಗೆ ‹ಲ್ಯಪ'' ಪ್ರತ್ಯಯುವು ಕೂಡಿದೆ. ‹ನಿ' ಎಂಬುಪಸರ್ಗಕ್ಕೆ ‹ಪತ್'' ಧಾತುವು ಪರವಾಗಿರುವುದರಿಂದ ನಕಾರಕ್ಕೆ ಣಕಾರಾದೇಶವು ಬಂದಿದೆ (೧೧) ‹ಸ್ಥಾ, ಧಾತುವು ಪರಸ್ಮೈಪದಿಯಾದರೂ, ಪೂಜಿಸುವಿಕೆ, ಹೊಗಳುವಿಕೆ ಎಂಬರ್ಥದಲ್ಲಿ ಉಪ ಎಂಬುಪಸರ್ಗವು ಸೇರಿದರೆ ಆತ್ಮನೇ ಪದಿಯಾಗುವುದೆಂಬ ವಾರ್ತಿಕೆಯಿಂದ ಆತ್ಮನೇ ಪದಬಂತು ‖೩‖

ಶ್ಲೋ‖ನಮಸ್ತ್ರಿಮೂರ್ತಯೇ ತುಭ್ಯಂ ಪ್ರಾಕ್ಸೃಷ್ಟೇಃ ಕೇವಲಾತ್ಮನೇ।
ಗುಣತ್ರಯ ವಿಭಾಗಾಯ ಪಶ್ಚಾದ್ಭೇದಮುಪೇಯುಷೇ ‖೪‖

ಪದ—(೧) ನಮಃ [೨] ತ್ರಿಮೂರ್ತಯೇ [೩] ತುಭ್ಯಂ [೪] ಪ್ರಾಕ್ [೫] ಸೃಷ್ಟೇಃ [೬] ಕೇವಲಾತ್ಮನೇ [೭] ಗುಣತ್ರಯವಿಭಾಗಾಯ [೮] ಪಶ್ಚಾತ್ [೯] ಭೇದಂ [೧೦] ಉಪೇಯುಷೇ

ಶಬ್ದ—(೧, ೪, ೮) ಅವ್ಯ. [೨] ಇ, ಪು, ಚ, ಏ (೩) ದ, ಪು, ಚ, ಏ (೫) ಇ, ಸ್ತ್ರೀ, ಪಂ, ಏ (೬) ನ,ಪು, ಚ, ಏ (೭) ಅ, ಪು, ಚ, ಏ (೯) ಅ, ಪು, ದ್ವಿ, ಏ (೧೦) ಸ. ಪು, ಚ, ಏ

ಅನ್ವಯ—(ಹೇಭಗವನ್) ಸೃಷ್ಟೇಃಪ್ರಾಕ್, ಕೇವಲಾತ್ಮನೇ ಪಶ್ಚಾತ್ ಗುಣತ್ರಯವಿಭಾಗಾಯ, ಭೇದ ಮುಪೇಯುಷೇ ತ್ರಿಮೂರ್ತಯೇ ತುಭ್ಯಂನಮಃ.

ಅರ್ಥ— (ಹೇಭಗವನ್-ಎಲೈ ಭಗವಂತನೇ) ಸೃಷ್ಟೇಃ-ಸೃಷ್ಟಿಗಿಂತ, ಪ್ರಾಕ್-ಪೂರ್ವದಲ್ಲಿ ಕೇವಲಾತ್ಮನೇ-ಏಕರೂಪನಾಗಿದ್ದ, ಪಶ್ಚಾತ್-ಸೃಷ್ಟ್ಯನಂತರದಲ್ಲಿ ಗುಣತ್ರಯ-ಮೂರುಗುಣಗಳ ವಿಭಾಗಾಯ-ವಿಭಾಗವುಳ್ಳ, ಭೇದಂ-ಸೃಷ್ಟಿಕರ್ತೃತ್ವಾದಿಭೇದ (ಉಪಾಧಿ) ವನ್ನು, ಉಪೇಯುಷೇ-ಹೊಂದಿದ, (ಆದಕಾರಣ] ತ್ರಿಮೂರ್ತಯೇ-ಮೂರುರೂಪಗಳುಳ್ಳವನಾದ ತುಭ್ಯಂ-ನಿನಗೆ, ನಮಃ-ನಮಸ್ಕಾರವು.

ತಾತ್ಪರ್ಯ—ಎಲೈ ಭಗವಂತನೇ ! ಜಗತ್ಸೃಷ್ಟಿಗೆ ಮುಂಚೆ ಬೇರೊಂದು ವಸ್ತುವಿಲ್ಲದೆ ಏಕರೂಪನಾಗಿದ್ದು [ಶ್ರು-ಆತ್ಮಾವಾ ಇದ ಮೇಕಏವಾಗ್ರ ಆಸೀತ್] ಸೃಷ್ಟಿಯಾದಾಗ ಸತ್ತ್ವರಜಸ್ತಮೋಗುಣಗಳೆಂಬ ಮೂರುಗುಣಗಳುಳ್ಳವನಾಗಿ, ಒಂದೊಂದುಗುಣದ ಉಪಾಧಿಯಿಂದ ಸೃಷ್ಟ್ಯಾದಿ ಒಂದೊಂದು ಕರ್ತೃತ್ವವನ್ನಾಶ್ರಯಿಸಿ, ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಮೂರುರೂಪನಾಗಿ, ಜಗತ್ಸೃಷ್ಟಿ ಸ್ಥಿತಿ ಲಯಕರ್ತೃವಾದ ನಿನಗೆ "ನಮೋರಜೋಜುಷೇಸೃಷ್ಟೌಸ್ಥಿತೌ ಸತ್ವಮಯಾಯಚ । ತಮೋರೂಪಾಯ ಸಂಹಾರೇ ತ್ರಿರೂಪಾಯಸ್ವಯಂಭುವೇ" ಎಂಬ ರೀತಿಯಾಗಿ ನಮಸ್ಕರಿಸುವೆವು ಎಂದು ಇಂದ್ರಾದಿದೇವತೆಗಳು ಬ್ರಹ್ಮನನ್ನು ಸ್ತೋತ್ರಮಾಡಿದರು.

ಆಕಾಂಕ್ಷೆ—ನಮಃ, ಕಸ್ಮೈ-ಯಾರಿಗೆ ? ತುಭ್ಯಂ ಕಥಂಭೂತಾಯ-ತುಭ್ಯಂ-ಎಂಥ ನಿನಗೆ ? ತ್ರಿಮೂರ್ತಯೇ, ಪುನಃಕಥಂಭೂತಾಯ ತುಭ್ಯಂ ? ಉಪೇಯುಷೇ, ಕಂ-ಏನನ್ನು ? ಭೇದಂ, ಪುನಃಕಥಂಭೂತಾಯತುಭ್ಯಂ ? ಗುಣತ್ರಯವಿಭಾಗಾಯ, ಕದಾ-ಯಾವಾಗ ? ಪಶ್ಚಾತ್. ಪುನಃಕಥಂಭೂತಾಯತುಭ್ಯಂ ? ಕೇವಲಾತ್ಮನೇ. ಕದಾ-ಯಾವಾಗ-ಪ್ರಾಕ್, ಕಸ್ಯಾಃ ? ಸೃಷ್ಟೇಃ.

ವಿಗ್ರಹ:—(೨) ತಿಸ್ರಃ ಮೂರ್ತಯಃ ಯಸ್ಯಸಃ-ತ್ರಿಮೂರ್ತಿಃ (ಷಬ. ವ್ರೀ) + ತಸ್ಮೈ (೬) ಕೇವಲಃ ಆತ್ಮಾ ಯಸ್ಯಸಃ-ಕೇವಲಾತ್ಮಾ (ಷಬ. ವ್ರೀ) + ತಸ್ಮೈ, (೭) ಗುಣಾನಾಂತ್ರಯಂ ಗುಣತ್ರಯಂ (ಷ. ತ) ಗುಣತ್ರಯಮೇವ ವಿಭಾಗಃ ಯಸ್ಯಸಃ-ಗುಣತ್ರಯವಿಭಾಗಃ (ಷ. ಬ ವ್ರೀ) + ತಸ್ಮೈ.

ವಿಶೇಷ:—(೨) ಇಲ್ಲಿ 'ನಮಃ' ಎಂಬ ಶಬ್ದದ ಯೋಗವಿರುವುದರಿಂದ ಚತುರ್ಥಿಬಂತು, (೫) 'ಸೃಜ್' ಧಾತುವಿನಮೇಲೆ 'ಕ್ತಿನ್' ಪ್ರತ್ಯಯವು ಬಂದು 'ಸೃಷ್ಟಿಃ' ಎಂದಾಯ್ತು ಇಲ್ಲಿ ಅಂಚೂತ್ತರಪದಯೋಗದಿಂದ ಪಂಚಮೀವಿಭಕ್ತಿ ಬಂದಿದೆ. (೭) ವಿಭಜ್ಯತೇ ಅನೇನ ಇತಿ-ವಿಭಾಗಃ ಕರ್ಮಾರ್ಥದಲ್ಲಿ 'ಅಚ್' ಪ್ರತ್ಯಯವು ಬಂತು (೧೦) 'ಉಪ' ಎಂಬ ಉಪಸರ್ಗದಿಂದ ಕೂಡಿದ 'ಇಣ್' ಧಾತುವಿನಮೇಲೆ 'ಕ್ವಸು' ಪ್ರತ್ಯಯವು

ಬಂದು ಉಪಸ್ಥಿಯಿವಾಃ, ಎಂದಾಗಿರುವ ರೂಪವನ್ನು 'ನಿಪಾತ' ಮಾಡಿದ್ದಾರೆ ॥೪॥

ಶ್ಲೋ॥ ಯದಮೋಘ ಮಪಾಮನ್ತ ರುಪ್ತಂ ಬೀಜ ಮಜ ತ್ವಯಾ ।
ಅತಶ್ಚರಾಚರಂ ವಿಶ್ವಂ ಪ್ರಭವ ಸ್ತಸ್ಯ ಗೀಯಸೇ ॥೫॥

ಪದ:—(೧) ಯತ್ (೨) ಅಮೋಘಂ (೩) ಅಪಾಂ (೪) ಅಂತಃ (೫) ಉಪ್ತಂ (೬) ಬೀಜಂ (೭) ಅಜ. (೮) ತ್ವಯಾ (೯) ಅತಃ (೧೦) ಚರಾಚರಂ (೧೧) ವಿಶ್ವಂ (೧೨) ಪ್ರಭವಃ (೧೩) ತಸ್ಯ (೧೪) ಗೀಯಸೇ.

ಶಬ್ದ:—(೧ ೪, ೯) ಅವ್ಯ [೨, ೫, ೬, ೧೦, ೧೧] ಅ. ನ. ಪ್ರ. ಏ (೩) ಪ, ಸ್ತ್ರೀ, ಷ, ಸಿತ್ಯಬ. [೭] ಅ, ಪು, ಸಂ, ಏ (೮) ದ, ಪು, ತೃ, ಏ (೧೨) ಅ, ಪು ಪ್ರ,ಏ [೧೩]ದ, ನ, ಷ, ಏ [೧೪] ಕ್ರಿ

ಅನ್ವಯ:—ಅಜ, ತ್ವಯಾ ಅಪಾಂ ಅಂತಃ ಯತ್ ಅಮೋಘಂ ಬೀಜಂ ಉಪ್ತಂ, ಅತಃ, ಚರಾಚರಂ ವಿಶ್ವಂ, ತಸ್ಯ ಪ್ರಭವಃ ಗೀಯಸೇ,

ಅರ್ಥ:—ಅಜ-ಬ್ರಹ್ಮನೇ, ತ್ವಯಾ-ನಿನ್ನಿಂದ, ಅಪಾಂ-ನೀರಿನ, ಅಂತಃ-ಒಳಗೆ, ಯತ್-ಯಾವಕಾರಣದಿಂದ, ಅಮೋಘಂ-ವ್ಯರ್ಥವಾಗದ, ಬೀಜಂ-ಬೀಜವು, (ವೀರ್ಯವು) ಉಪ್ತಂ-ಬಿತ್ತಲ್ಪಟ್ಟಿತೋ, ಅತಃ-ಆ ಬೀಜದ ದೆಸೆಯಿಂದಲೇ, ಚರಾಚರಂ-ಸ್ಥಾವರಜಂಗಮಾತ್ಮಕವಾದ, ವಿಶ್ವಂ-ಈ ಪ್ರಪಂಚವು, (ಉತ್ಪನ್ನವಾಯ್ತು) ತಸ್ಯ-ಆ ಪ್ರಪಂಚಕ್ಕೆ, ಪ್ರಭವಃ-ಕಾರಣನಾಗಿ, ಗೀಯಸೇ-ಕೀರ್ತಿಸಲ್ಪಡುತ್ತೀಯೆ [ಜನರಿಂದ.]

ತಾತ್ಪರ್ಯ:—ಎಲೈಬ್ರಹ್ಮನೇ! ನೀನು ಸೃಷ್ಟ್ಯಾದಿಯಲ್ಲಿಅಪಾರವಾದ ಜಲರಾಶಿಯನ್ನು ನಿರ್ಮಿಸಿ ಅದರಲ್ಲಿ ಸುಫಲವಾದ ನಿನ್ನ ವೀರ್ಯವನ್ನು ಯಾವಕಾರಣದಿಂದ ಇಟ್ಟೆಯೋ, ಆ ಕಾರಣದಿಂದ ಅದು ಜಗದ್ಬೀಜವಾಗಿ ಈ ಚರಾಚರಾತ್ಮಕವಾದ ಪ್ರಪಂಚರೂಪವಾಯ್ತು. ಅದರಿಂದ ನೀನೇ ಈ ಪ್ರಪಂಚದ ಉತ್ಪತ್ತಿಗೆ ಕಾರಣನೆಂದು ಲೋಕದಿಂದ ಹೊಗಳಿಸಿಕೊಳ್ಳುತ್ತಿರುವಿ.

ಆಕಾಂಕ್ಷೆ—ಗೀಯಸೇ, [ಕೈಃ-ಲೋಕೈಃ] ಕಃ-ಯಾರು ? ತ್ವಂ (ಕ, ಪ್ರ) ಕಥಂಭೂತಃ-ಎಂಥವನಾಗಿ ? ಪ್ರಭವಃ, ಕಸ್ಯ-ಯಾವುದ

ಕ್ಕ ? ತಸ್ಯ, ವಿಶ್ವಂ. ಕಥಂಭೂತಂವಿಶ್ವಂ-ಎಂಥ ಪ್ರಪಂಚವು ? ಚ ರಾಚರಂ, ಕುತಃ-ಯಾವಕಾರಣದಿಂದ ? ಅತಃ, ಉಪ್ತಂ, ಕಿಂ-ಏನು? ಬೀಜಂ, ಕಥಂಭೂತಂಬೀಜಂ - ಎಂತಹ ಬೀಜವು ? [ವೀರ್ಯವು] ಅ ಮೋಘಂ, ಕುತ್ರ-ಎಲ್ಲಿ ? ಅಂತಃ, ಕಾಸಾಂ-ಯಾವುದರ ? ಅಪಾಂ. ಕೇನ-ಯಾರಿಂದ ? ತ್ವಯಾ. ತಸ್ಯಸಂಬುದ್ಧಿಃ ಹೇಅಜ.

ವಿಗ್ರಹ—[೨] ನಮೋಘಂ-ಅಮೋಘಂ (ನಞ್. ತ) (೧೦) ಚ ರಾಣಾಂಚ ಅಚರಾಣಾಂಚಸಮಾಹಾರಃ ಚರಾಚರಂ (ಸ, ದ್ವಂ)

ಧಾತುರೂಪ—(೧೪) ಗೀಯತೇ, ಗೀಯೇತೇ, ಗೀಯಂತೇ,
ಗೀಯಸೇ, ಗೀಯೇಥೇ, ಗೀಯಧ್ವೇ,
ಗೀಯೇ ಗೀಯಾವಹೇ, ಗೀಯಾಮಹ

ಧಾತ್ವರ್ಥ — [ಗೈ-ಶಬ್ದೇ] ಶಬ್ದಮಾಡುವಿಕೆ, ಎಂಬರ್ಥವುಳ್ಳ ಭ್ವಾದಿ ಒಂದನೆಯ ಗಣದ ಪರಸ್ಮೈಪದಿ ಗೈ ಎಂಬ ಧಾತುವಿಗೆ ಕರ್ಮಾ ರ್ಥ 'ಯಕ್' ಪ್ರತ್ಯಯವನ್ನು ಹೊಂದಿದ್ದರಿಂದ ಆತ್ಮನೇಪದವಾಗಿ ಧಾ ತುವಿನ ಐಕಾರಕ್ಕೆ ಆಕಾರಾದೇಶವೂ, ಆಕಾರಕ್ಕೆ ಈಕಾರಾದೇಶವೂ ಬಂದು ಲಿಟ್ ಲಕಾರದ ವರ್ತಮಾನರೂಪ ಪ್ರಥಮಪುರುಷೈಕವಚನ

ವಿಶೇಷ —(೫) ವಪ್, ಧಾತುವಿಗೆ ಕರ್ಮಾರ್ಥದಲ್ಲಿ 'ಕ್ತ' ಪ್ರ ತ್ಯಯವು ಬಂದು, ಧಾತುವಿನ ವಕಾರಕ್ಕೆ ಸಂಪ್ರಸಾರಣವು ಬಂತು. ಇಲ್ಲಿ ಉಪ್ತಂಎಂಬುದಕ್ಕೆ ಮುಕ್ತಂ ಎಂದು ಪಾಠಾಂತರವು (೭) ನ ಜಾಯತೇ-ಇತ್ಯಜಃ-ಉತ್ಪತ್ತಿರಹಿತನು (೧೦) ಸಮಾಹಾರದಲ್ಲಿ ಏಕವ ದ್ಭಾವವು ಬಂತು (೧೩) ಪ್ರಭವತ್ಯಸ್ಮಾತ್-ಇತಿ ಪ್ರಭವಃ (ಕೃ. ವೃ) ಈ ಶ್ಲೋಕದ ಎರಡನೆಯ ಅರ್ಧಕ್ಕೆ "ಅವಷ್ಟರಾಚರಂ ವಿಶ್ವಂ ಪ್ರಸವಸ್ತ ಸ್ಯಗೀಯತೇ" ಎಂದು ಪಾಠಾಂತರವು ಅದಃ-ಈ, ಚರಾಚರಂವಿಶ್ವಂ, ತ ಸ್ಯ-ಆ ವೀರ್ಯದ, ಪ್ರಸವಃ-ಪುಷ್ಪವು (ಎಂಬದಾಗಿ) ಗೀಯತೇ-ಹೆ ಳಲ್ಪಡುತ್ತದೆ ಈ ವಿಷಯದಲ್ಲಿ ಮನುವು " ಅಪಏವ ಸಸರ್ಜಾದೌ ತಾಸು ವೀರ್ಯಮವಾಸೃಜತ್। ತದಣ್ಡಮಭವದ್ಧೈಮಂ ಸಹಸ್ರಾಂಶುಸಮಪ್ರ ಭಂ " ಅಂದರೆ ಭಗವಂತನು ಮೊದಲು ಉದಕರಾಶಿಯನ್ನು ನಿರ್ಮಿಸಿ ಅದರಲ್ಲಿ ತನ್ನ ವೀರ್ಯವನ್ನಿಟ್ಟನು. ಅದು ಸೂರ್ಯಕೋಟಿಪ್ರಕಾಶಮಾನ

ವಾದ ಸುವರ್ಣಮಯವಾದ ಅಂಡವಾಯ್ತು ; ಎಂದು ಹೇಳಿದ್ದಾನೆ ॥೫॥

ಶ್ಲೋ ॥ ತಿಸೃಭಿ ಸ್ತ್ವ ಮವಸ್ಥಾಭಿರ್ಮಹಿಮಾನ ಮುದೀರಯನ್ ।
ಪ್ರಲಯಸ್ಥಿತಿ ಸರ್ಗಾಣಾಂ ಏಕಃ ಕಾರಣತಾಂ ಗತಃ ॥೬॥

ಪದ—(೧) ತಿಸೃಭಿಃ (೨) ತ್ವಂ (೩) ಅವಸ್ಥಾಭಿಃ (೪) ಮಹಿಮಾನಂ (೫) ಉದೀರಯನ್ (೬) ಪ್ರಲಯಸ್ಥಿತಿಸರ್ಗಾಣಾಂ (೭) ಏಕಃ (೮) ಕಾರಣತಾಂ (೯) ಗತಃ.

ಶಬ್ದ— (೧) ಅ, ಸ್ತ್ರೀ, ತೃ, ಬ (೨) ದ, ಪು, ಪ್ರ, ಏ (೩) ಆ ಸ್ತ್ರೀ, ತೃ, ಬ (೪) ನ, ಪು, ದ್ವಿ, ಏ (೫) ತ, ಪು, ಪ್ರ, ಏ (೬) ಅ, ಪುಷ, ಬ. (೭) ಅ, ಪು, ಪ್ರ, ಏ, (೮) ಆ, ಸ್ತ್ರೀ, ದ್ವಿ, ಏ.

ಅನ್ವಯ—ಏಕಃತ್ವಂ ತಿಸೃಭಿಃ ಅವಸ್ಥಾಭಿಃ ಮಹಿಮಾನಂ ಉದೀರಯನ್, ಪ್ರಲಯಸ್ಥಿತಿ ಸರ್ಗಾಣಾಂ ಕಾರಣತಾಂಗತಃ.

ಅರ್ಥ—ಏಕಃ-ಸೃಷ್ಟಿಗೆ ಪೂರ್ವದಲ್ಲಿ ಒಬ್ಬನೇ ಆಗಿದ್ದ, ತ್ವಂ-ನೀನು, ತಿಸೃಭಿಃ-ಮೂರಾದ, ಅವಸ್ಥಾಭಿಃ-ಹರಿಹರಬ್ರಹ್ಮಸ್ವರೂಪಗಳಿಂದ ಮಹಿಮಾನಂ-ಸ್ವಶಕ್ತಿಯನ್ನ, ಉದೀರಯನ್- ವಿಸ್ತರಿಸಿದವನಾಗಿ, ಪ್ರಲಯ-ನಾಶವೂ, ಸ್ಥಿತಿ-ಪಾಲನವೂ, ಸರ್ಗಾಣಾಂ-ಸೃಷ್ಟಿಯೂ, ಇವುಗಳಿಗೆ, ಕಾರಣತಾಂ-ಕಾರಣತ್ವವನ್ನು, ಗತಃ-ಹೊಂದಿದೆ.

ತಾತ್ಪರ್ಯ—ಪ್ರಪಂಚೋತ್ಪತ್ತಿಗಿಂತ ಪೂರ್ವದಲ್ಲಿ ಬೇರೊಂದು ಪದಾರ್ಥವೂ ಇಲ್ಲದೆ ಒಬ್ಬನೇ ಇದ್ದ ನೀನು ಸತ್ವರಜಸ್ತಮೋಗುಣಗಳನ್ನವಲಂಬಿಸಿ ಮೂರು ರೂಪುಳ್ಳವನೆನ್ನಿಸಿಕೊಂಡು, ಸತ್ವಗುಣದಿಂದವಿಷ್ಣುವಾಗಿ ಜಗತ್ತನ್ನು ಪಾಲಿಸುತ್ತಲೂ, ರಜೋಗುಣವನ್ನು ತಳೆದು ಬ್ರಹ್ಮನೆನಿಸಿಕೊಂಡು ಸೃಷ್ಟಿಕರ್ತೃವಾಗಿ, ತಮೋಗುಣಾಶ್ರಯನಾಗಿ ಪರಮೇಶ್ವರರೂಪದಿಂದ ಪ್ರಪಂಚವನ್ನು ಲಯಗೊಳಿಸುತ್ತಾ, ಹೀಗೆಯೇ ನಿನ್ನ ಮಾಹಾತ್ಮ್ಯೆಯನ್ನು ಪ್ರಕಟಿಸಿದವನಾಗಿದ್ದೀಯೆ.

ಆಕಾಂಕ್ಷೆ—ಗತಃ, ಕಃ-ಯಾರು ? ತ್ವಂ, ಕಾಂ-ಏನನ್ನು ? ಕಾರಣತಾಂ (ಸ, ಪು,) ಕೇಷಾಂ-ಯಾವವುಗಳಿಗೆ? ಪ್ರಲಯಸ್ಥಿತಿ ಸರ್ಗಾಣಾಂ. ಕಥಂಭೂತಃ-ಎಂಥವನಾಗಿ ? ಉದೀರಯನ್, ಕಂ-ಏನನ್ನು ? ಮಹಿಮಾನಂ, ಕಾಭಿಃ-ಯಾವವುಗಳಿಂದ ? ಅವಸ್ಥಾಭಿಃ, ಕಥಂಭೂತಾಭಿಃ

ಅವಸ್ಥಾಭಿಃ-ಎಂಥ ಅವಸ್ಥೆಗಳಿಂದ ? ತಿಸೃಭಿಃ, ಕಥಂಭೂತಸ್ತ್ವಂ-ಎಂಥ ನೀನು ? ಏಕಃ.

ವಿಗ್ರಹ—(೬) ಪ್ರಲಯಶ್ಚ, ಸ್ಥಿತಿಶ್ಚ, ಸರ್ಗಶ್ಚ-ಪ್ರಲಯಸ್ಥಿತಿಸರ್ಗಾಃ (ದ್ವಂದ್ವ) + ತೇಷಾಂ.

ವಿಶೇಷ—(೧) ತ್ರಿ, ಶಬ್ದವು ಸ್ತ್ರೀಲಿಂಗದಲ್ಲಿ ‹ತಿಸೃ' ಎಂಬ ರೂಪವನ್ನು ಪಡೆಯುವುದು (೪) ಮಹಶಬ್ದದಮೇಲೆ 'ಇಮನಿಚ್' ಪ್ರತ್ಯಯವು ಬಂದಿದೆ (೫) ಯುತ್ ಎಂಬ ಉಪಸರ್ಗದಿಂದ ಕೂಡಿದ ಖಿದ ಧಾತುವಿಗೆ 'ಶತೃ, ಪ್ರತ್ಯಯವು ಸೇರಿರುತ್ತದೆ. (೭) ಏಕಶಬ್ದವು, ಮುಖ್ಯ ಕೇವಲ. ಅನ್ಯ, ಒಂದು, ಈ ಅರ್ಥಗಳಲ್ಲಿ ವರ್ತಿಸುತ್ತದೆ (೮) ಕಾರಣಸ್ಯಭಾವಃ-ಕಾರಣತಾ. ಭಾವಾರ್ಥದಲ್ಲಿ ‹ತಲ್' ಪ್ರತ್ಯಯವು ಬಂತು. (ನ, ವ್ಯ) + ತಾಂ, (೯) ಗಮ್ಲ್ ಎಂಬ ಧಾತುವಿನ ಮೇಲೆ ಕರ್ತ್ರರ್ಥದಲ್ಲಿ ‹ಕ್ತ' ಪ್ರತ್ಯಯವು ಬಂದಿದೆ. ಈ ಶ್ಲೋಕವು ೪ನೆಯ ಶ್ಲೋಕದಲ್ಲಿ ‹ಪಶ್ಚಾದ್ಭಿನ್ನೋದಮ್...ಪೇಯುಷೇ' ಎಂಬುವಗನ್ನು ವಿವರಣೆಮಾಡುತ್ತದೆಯಾಗಿ ಪೌನರುಕ್ತ್ಯದೋಷವಿಲ್ಲ ॥೬॥

ಶ್ಲೋ॥ ಸ್ತ್ರೀಪುಂಸಾವಾತ್ಮಭಾಗೌ ತೇ ಭಿನ್ನಮೂರ್ತೇಃ ಸಿಸೃಕ್ಷಯಾ ।
ಪ್ರಸೂತಿಭಾಜಃ ಸರ್ಗಸ್ಯ ತಾವೇವ ಪಿತರೌ ಸ್ಮೃತೌ ॥೭॥

ಪದ—(೧) ಸ್ತ್ರೀಪುಂಸೌ (೨) ಆತ್ಮಭಾಗೌ (೩) ತೇ (೪) ಭಿನ್ನಮೂರ್ತೇಃ (೫) ಸಿಸೃಕ್ಷಯಾ (೬) ಪ್ರಸೂತಿಭಾಜಃ (೭) ಸರ್ಗಸ್ಯ (೮) ತೌ (೯) ಏವ (೧೦) ಪಿತರೌ (೧೧) ಸ್ಮೃತೌ.

ಶಬ್ದ—(೧, ೨, ೧೧) ಅ, ಪು, ಪ್ರ, ದ್ವಿ, (೩) ದ, ಪು, ಷ, ಏ (೪) ಇ, ಪು, ಷ, ಏ (೫) ಆ, ಸ್ತ್ರೀ, ತೃ, ಏ (೬) ಜ, ಪು, ಷ, ಏ (೭) ಅ, ಪು, ಷ, ಏ (೮) ದ, ಪು, ಪ್ರ, ದ್ವಿ (೯) ಅವ್ಯ (೧೦) ಋ ಪು, ಪ್ರ, ದ್ವಿ.

ಅನ್ವಯ— ಸಿಸೃಕ್ಷಯಾ ಭಿನ್ನಮೂರ್ತೇಃ ತೇ ಸ್ತ್ರೀಪುಂಸೌ ಆತ್ಮಭಾಗೌ, ತಾವೇವ ಪ್ರಸೂತಿ ಭಾಜಃ ಸರ್ಗಸ್ಯ ಪಿತರೌಸ್ಮೃತೌ.

ಅರ್ಥ—ಸಿಸೃಕ್ಷಯಾ-ಸೃಷ್ಟಿಮಾಡಬೇಕೆಂಬ ಪೇಕ್ಷೆಯಿಂದ, ಭಿನ್ನ - ಎರಡುವಿಧವಾಗಿ ಭಾಗಿಸದ, ಮೂರ್ತೇಃ-ದೇಹವುಳ್ಳ, ತೇ-ನಿನ್ನ,

ಸ್ತ್ರೀಪುಂಸೌ-ಸ್ತ್ರೀಪುರುಷರೂಪವಾದ,ಆತ್ಮಭಾಗೌ-ನಿನ್ನ ದೇಹಭಾಗಗಳಾದ, ತೌಏವ-ಆ ಭಾಗಗಳೇ, ಪ್ರಸೂತಿಭಾಜಃ-ಉತ್ಪತ್ತಿಯನ್ನು ಹೊಂದುತ್ತಿರುವ, ಸರ್ಗಸ್ಯ-ಸೃಷ್ಟಿಗೆ, ಪಿತರೌ-ತಂದೆತಾಯಿಗಳೆಂದು. ಸ್ಮೃತೌ-ತಿಳಿಯಲ್ಪಟ್ಟವು (ಹಿರಿಯರಿಂದ)

ತಾ॥ ಹಿಂದೆ ಹೇಳಿದಂತೆ ಭೂತಸೃಷ್ಟಿಯಾದಮೇಲೆ ಸ್ತ್ರೀಪುರುಷರೂಪವಾದ ಪ್ರಪಂಚಸೃಷ್ಟಿಯನ್ನು ಬಯಸಿ ನಿನ್ನ ದೇಹವನ್ನು ಎರಡುವಿಧವಾಗಿ ಭಾಗಿಸಿ ಸ್ತ್ರೀಪುರುಷರೂಪವನ್ನು ಪಡೆದದ್ದು ಸರಿಯಷ್ಟೆ. ಆ ನಿನ್ನ ದೇಹಭಾಗಗಳಾದ ಸ್ತ್ರೀಪುಂರೂಪಗಳೇ ಜನನವನ್ನು ಪಡೆವ ಸೃಷ್ಟಿಗೆ ತಂದೆತಾಯಿಗಳೆಂದು ಹಿರಿಯರು ನಿಶ್ಚಯಿಸಿರುವರು.

ಆಕಾಂಕ್ಷೆ—ಸ್ಮೃತೌ, ಕೌ-ಯಾರು ? ತೌ, ಕಥಂಭೂತೌ-ಎಂಥವರಾಗಿ ? ಪಿತರೌ, ಕಸ್ಯ-ಯಾವುದಕ್ಕೆ ? ಸರ್ಗಸ್ಯ, ಕಥಂಭೂತಸ್ಯ ಸರ್ಗಸ್ಯ - ಎಂಥ ಸೃಷ್ಟಿಗೆ ? ಪ್ರಸೂತಿಭಾಜಃ, ಕಥಂಭೂತೌತೌ-ಎಂಥವು, ಆತ್ಮಭಾಗೌ, ಪುನಃ ಕಥಂಭೂತೌತೌ ? ಸ್ತ್ರೀಪುಂಸೌ. ಕಸ್ಯ-ಯಾರ ? ತೇ, ಕಥಂಭೂತಸ್ಯತೇ-ಎಂಥ ನಿನಗೆ ? ಭಿನ್ನಮೂರ್ತೇಃ, ಕಯಾ-ಯಾರಿಂದ ? ಸಿಸೃಕ್ಷಯಾ.

ವಿಗ್ರಹ— (೧) ಸ್ತ್ರೀಚ,ಪುಮಾಂಶ್ಚ-ಸ್ತ್ರೀಪುಂಸೌ (ದ್ವಂದ್ವ) (೨) ಆತ್ಮನಃಭಾಗೌ-ಆತ್ಮಭಾಗೌ (ಷ, ತ) (೪) ಭಿನ್ನಾ, ಮೂರ್ತಿಃ ಯಸ್ಯಸಃ-ಭಿನ್ನಮೂರ್ತಿಃ (ಸ, ಬ, ವ್ರೀ) + ತಸ್ಯ (೬) ಪ್ರಸೂತಿಂಭಜತೀತಿ-ಪ್ರಸೂತಿಭಾಕ್ (ಕೃ, ವೃ) + ತಸ್ಯ, (೧೧) ಮಾತಾಚ,ಪಿತಾಚ-ಪಿತರೌ (ಏಕಶೇಷ)

ವಿಶೇಷ—(೧) ಸ್ತ್ರೀಪುಂಸ ಎಂಬ ಅಚ್‌ಪ್ರತ್ಯಯಾಂತಶಬ್ದವನ್ನು ನಿಪಾತಮಾಡಿದ್ದಾರೆ (೨) ಆತ್ಮನ್ ಶಬ್ದವು, ಜೀವ, ಧೈರ್ಯ, ದೇಹ ಸ್ವಭಾವ, ಪರಮಾತ್ಮ ಇವುಗಳಲ್ಲಿ ವರ್ತಿಸುವುದು (೪) ಸ್ರಷ್ಟುಮಿಚ್ಛಾ-ಸಿಸೃಕ್ಷಾ, ಸೃಜ್ ಧಾತುವಿಗೆ ಇಚ್ಛಾರ್ಥದಲ್ಲಿ ಸನ್ ಪ್ರತ್ಯಯವು ಸೇರಿದುದರಿಂದ ಧಾತುವಿಗೆ ದ್ವಿತ್ವವು ಬಂತು, ಧಾತ್ವಂತದ ಜಕಾರಕ್ಕೆ ಕಾತ್ವವು ಬಂತು 'ಸಿಸೃಕ್' ಎಂದಾಗಿ ಸನ್ ಪ್ರತ್ಯಯ ಸಕಾರಕ್ಕೆ ಮೂರ್ಧನ್ಯಾದೇಶವು ಬಂದು ಸ್ತ್ರೀಲಿಂಗವಾಗಿ ಸಿಸೃಕ್ಷಾ ಎಂ

ದಾಗಿದೆ (೯) ಸೃಜ್ಯತೇ ಇತಿ ಸರ್ಗಃ 'ಅಚ್' ಪ್ರತ್ಯಯವು ಬಂತು. (ಕೃ, ವೃ) (೧೦) ಮಾತೃಶಬ್ದದೊಡನೆ ಪಿತೃಶಬ್ದವು ಸೇರಿ ಸಮಾಸವಾಗಿರುವುದರಿಂದ ಪಿತೃಶಬ್ದವೊಂದೇ ಉಳಿಯಿತು (೧೧) 'ಸ್ಮೃ' ಧಾತುವಿಗೆ ಕರ್ಮಾರ್ಥದಲ್ಲಿ ಕ್ತ ಪ್ರತ್ಯಯವು ಬಂದಿದೆ. ಬ್ರಹ್ಮನ ದೇಹದ ಭಾಗದ್ವಯವೇ ಸ್ತ್ರೀಪುರುಷಸೃಷ್ಟಿಗೆ ಮೊದಲಾಯಿತೆಂದೆಗಳಾಯಿತೆಂಬುದನ್ನು ಮನುವು:- "ದ್ವಿಧಾಕೃತ್ವಾತ್ಮನೋದೇಹ ಮರ್ಧೇನಪುರುಷೋಭವತ್, ಅರ್ಧೇನನಾರೀ ತಸ್ಯಾಂ ಸ ವಿರಾಜಮಸೃಜತ್ಪ್ರಭುಃ," ಎಂಬ ಶ್ಲೋಕದಲ್ಲಿ ಹೇಳಿರುವನು ॥೭॥

ಶ್ಲೋ॥ ಸ್ವಕಾಲಪರಿಮಾಣೇನ ವ್ಯಸ್ತರಾತ್ರಿಂದಿವಸ್ಯ ತೇ ।
ಯೌತು ಸ್ವಪ್ನಾವಬೋಧೌ ತೌ ಭೂತಾನಾಂ ಪ್ರಲಯೋದಯೌ ॥

ಪದ—(೧) ಸ್ವಕಾಲ ಪರಿಮಾಣೇನ (೨) ವ್ಯಸ್ತರಾತ್ರಿಂದಿವಸ್ಯ (೩) ತೇ (೪) ಯೌ (೫) ತು (೬) ಸ್ವಪ್ನಾವಬೋಧೌ (೭) ತೌ (೮) ಭೂತಾನಾಂ (೯) ಪ್ರಲಯೋದಯೌ,

ಶಬ್ದ—(೧) ಅ, ಪು, ತೃ, ಏ (೨) ಅ, ಪು, ಷ, ಏ (೩) ದ ಪು, ಷ, ಏ (೪) ಯ ಪು ಪ್ರ, ದ್ವಿ (೫) ಅವ್ಯ, (೬, ೯) ಅ, ಪು, ಪ್ರ, ದ್ವಿ (೭) ದ ಪು, ಪ್ರ, ದ್ವಿ (೮) ಅ ನ, ಷ, ಬ.

ಅನ್ವಯ—ಸ್ವಕಾಲಪರಿಮಾಣೇನ ವ್ಯಸ್ತರಾತ್ರಿಂದಿವಸ್ಯ ತೇ ಸ್ವಪ್ನಾವಬೋಧೌ ಯೌ ತೌತು ಭೂತಾನಾಂ ಪ್ರಲಯೋದಯೌ.

ಅರ್ಥ—ಸ್ವ-ನಿನ್ನ, ಕಾಲ-ಕಾಲದ, ಪರಿಮಾಣೇನ-ಪ್ರಮಾಣದಿಂದ, ವ್ಯಸ್ತ-ವಿಭಾಗಿಸಲ್ಪಟ್ಟ, ರಾತ್ರಿಂದಿವಸ್ಯ-ರಾತ್ರಿಹಗಲುಗಳೆಂಬ, ಭೇದವುಳ್ಳ, ತೇ-ನಿನ್ನ ಸ್ವಪ್ನ ನಿದ್ರೆಯೂ, ಅವಬೋಧ-ಎಚ್ಚರವೂ, ಯೌ-ಯಾವವೋ, ತೌತು- ಅವುಗಳೇ, ಭೂತಾನಾಂ-ಭೂತಗಳಿಗೆ, ಪ್ರಲಯ-ಸಂಹಾರವೂ, ಉದಯೌ-ಉತ್ಪತ್ತಿಯೂ, (ಆಗುವವು)

ತಾತ್ಪರ್ಯ:—'ಚತುರ್ಯುಗ ಸಹಸ್ರಾಣಿ ಬ್ರಹ್ಮಣೋದಿವ ಮುಚ್ಯತೇ' ಅಂದರೆ - ಚತುರ್ಯುಗಗಳು ಸಾವಿರಸಾರಿ ಮರಳಿದರೆ ಬ್ರಹ್ಮನಿಗೆ ಒಂದು ಹಗಲಾಗುವುದು. ಎಂಬ ಕಾಲಪ್ರಮಾಣದಿಂದ ಕಾಲವನ್ನು ನೀನು ಹಗಲು ರಾತ್ರಿಗಳೆಂಬ ಭೇದವನ್ನು ಕಲ್ಪಿಸಿಕೊಂಡಿರಲು, ನಿನ್ನ

ನಿದ್ರೆ, ಮತ್ತು ಎಚ್ಚರಗಳ ಕಾಲವೇ ಸಮಸ್ತ ಭೂತಗಳಿಗೂ ಪ್ರಳಯ, ಉತ್ಪತ್ತಿ ಇವುಗಳಾಗಿರುವವು. ಅಂದರೆ ಪರಮಾತ್ಮನು ಎಚ್ಚತ್ತಿದ್ದರೆ ಪ್ರಪಂಚವು ಬದುಕಿರುವುದು. ನಿದ್ರೆಯಲ್ಲಿದ್ದರೆ ಪ್ರಪಂಚವು ವಿಲಯವನ್ನು ಹೊಂದುವುದೆಂಬ ಭಾವವು

ಆಕಾಂಕ್ಷೆ—ಪ್ರಲಯೋದಯೌ, ಕಾ-ಯಾವುವು? ತೌ, ಕೇಷಾಂ-ಯಾರಿಗೆ? ಭೂತಾನಾಂ, ಕೌತು - ಯಾವುವಾದರೋ? ಸ್ವಪ್ನಾವಬೋಧೌತು. ಕಸ್ಯ-ಯಾರ? ತೇ, ಕಥಂಭೂತಸ್ಯತೇ-ಎಂಥ ನಿನ್ನ? ವ್ಯಸ್ತರಾತ್ರಿಂದಿವಸ್ಯ, ಕೇನ-ಯಾತರಿಂದ? ಸ್ವಕಾಲಪರಿಮಾಣೇನ.

ವಿಗ್ರಹ—(೧) ಸ್ವಸ್ಯಕಾಲಃ-ಸ್ವಕಾಲಃ (ಷ, ತ) ಸ್ವಕಾಲಸ್ಯಪರಿಮಾಣಂ-ಸ್ವಕಾಲಪರಿಮಾಣಂ (ಷ, ತ) + ತೇನ, (೨) ರಾತ್ರಿಶ್ಚದಿವಾಚ-ರಾತ್ರಿಂದಿವಂ (ದ್ವಂದ್ವ) ವ್ಯಸ್ತಂ,ರಾತ್ರಿಂದಿವಂ ಯಸ್ಯಸಃ-ವ್ಯಸ್ತರಾತ್ರಿಂದಿವಃ (ಪ, ಬ, ವ್ರೀ) + ತಸ್ಯ (೬) ಸ್ವಪ್ನಶ್ಚ ಅವಬೋಧಶ್ಚ-ಸ್ವಪ್ನಾವಬೋಧೌ (ದ್ವಂದ್ವ) (೯) ಪ್ರಲಯಶ್ಚ ಉದಯಶ್ಚ (ದ್ವಂ)

ವಿಶೇಷ—(೧) ಪರಿಣಾಮೇನ ಎಂಬ ಪಾಠಾಂತರವು (೨) ರಾತ್ರಿಂದಿವ ಶಬ್ದವನ್ನು ನಿಪಾತಮಾಡಿದ್ದಾರೆ (೪) ಯೌ ಸ್ವಪ್ನಬೋಧಾತಾವೇವ, "ಸ್ವಪ್ನಾವಬೋಧೌ ಭೂತಾನಾಂತಾವೇವ,, ಇವೆರಡೂ ಪಾಠಾಂತರಗಳು. ಶ್ಲೋ॥ ಯದಾಸದೇವೋಜಾಗರ್ತಿತದೈವಂ ಚೇಷ್ಟತೇಜಗತ್ ,, ಯದಾಸ್ವಪಿತಿಶಾಂತಾತ್ಮಾತದಾಸರ್ವಂ ಪ್ರಲೀಯತೇ ,, ಪರಮಾತ್ಮನು ಜಾಗ್ರದವಸ್ಥೆಯಲ್ಲಿರುವಾಗ ಪ್ರಪಂಚವು ವ್ಯಾಪಾರವುಳ್ಳದ್ದಾಗುವುದು, ಶಾಂತಚಿತ್ತನಾಗಿ ಯೋಗನಿದ್ರೆಯನ್ನು ಹೊಂದಿದರೆ ಜಗತ್ತೆಲ್ಲವೂ ಆತನಲ್ಲಿ ಲೀನವಾಗುವುದು ಎಂದು ಭಗವಂತನ ದೈನಂದಿನ ಸೃಷ್ಟಿಲಯಗಳನ್ನು ಇದರಿಂದ ಸೂಚಿಸಿದ ಹಾಗಾಯ್ತು, ಮಹಾಪ್ರಳಯವು ಬ್ರಹ್ಮನ ವರ್ಷಶತಾಂತದಲ್ಲಾಗುವುದೆಂದು ತಿಳಿಯಬೇಕು॥೮॥

ಶ್ಲೋ॥ ಜಗದ್ಯೋನಿ ರಯೋನಿ ಸ್ತ್ವಂಜಗದಂತೋ ನಿರಂತಕಃ।
ಜಗದಾದ ರನಾದಿ ಸ್ತ್ವಂ ಜಗದೀಶೋ ನಿರೀಶ್ವರಃ ॥೯॥

ಪದ—(೧) ಜಗದ್ಯೋನಿಃ (೨) ಅಯೋನಿಃ (೩) ತ್ವಂ (೪) ಜಗದಂತಃ (೫) ನಿರಂತಕಃ (೬) ಜಗದಾದಿಃ (೭) ಅನಾದಿಃ (೮) ತ್ವಂ

(೯) ಜಗದೀಶಃ (೧೦) ನಿರೀಶ್ವರಃ.

ಶಬ್ದ—(೧, ೨, ೬, ೭) ಇ, ಪು, ಪ್ರ, ಏ (೩, ೮) ದ, ಪು, ಪ್ರ ಏ (೪, ೫, ೯, ೧೦) ಅ, ಪು, ಪ್ರ, ಏ

ಅನ್ವಯ—ತ್ವಂ ಜಗದ್ಯೋನಿಃ ಅಯೋನಿಃ, ಜಗದಂತಃ ನಿರಂತಕಃ, ತ್ವಂ ಜಗದಾದಿಃ ಅನಾದಿಃ, ಜಗದೀಶಃ ನಿರೀಶ್ವರಃ

ಅರ್ಥ---ತ್ವಂ-ನೀನು, ಜಗತ್-ಪ್ರಪಂಚಕ್ಕೆ, ಯೋನಿಃ-ಉತ್ಪತ್ತಿ ಕಾರಣನು, ಅಯೋನಿಃ-ನಿನಗೆ ಕಾರಣವಿಲ್ಲವು, ಜಗತ್-ಲೋಕಕ್ಕೆ, ಅಂತಃ-ನಾಶಕಾರಕನು, ನಿರಂತಕಃ-ಅಂತರಹಿತನು (ಕೊನೆಯಿಲ್ಲದವನು) ತ್ವಂ-ನೀನು ಜಗತ್-ಜಗತ್ತಿಗೆ, ಈಶಃ-ಒಡೆಯನು, ನಿರೀಶ್ವರಃ-ಶಿಕ್ಷಕನಿಲ್ಲದವನು (ಆಗಿದ್ದೀಯೆ)

ತಾತ್ಪರ್ಯ ॥ ಎಲೈ ಭಗವಂತನೇ ! ನೀನು ಪ್ರಪಂಚದ ಉತ್ಪತ್ತಿಗೆ ಕಾರಣನು (ಶ್ರು-ಯತೋವಾ ಇಮಾನಿಭೂತಾನಿ ಜಾಯಂತೇ) ಅನಾದಿಯಾದವನಾದುದರಿಂದ ನಿನಗೆ ಕಾರಣರಾರೂ ಇಲ್ಲ, ನೀನೇ ಲೋಕದ ಸ್ಥಿತಿ (ರಕ್ಷಣೆ) ಯನ್ನು ಮಾಡುವನು [ಶ್ರು-ಯೇನಜಾತಾನಿಜೀವಂತಿ) ಆದರೆ ನೀನು ಸರ್ವಶಕ್ತನಾದುದರಿಂದ ನಿನಗೆ ರಕ್ಷಕರಾರೂ ಇಲ್ಲವು. ಮತ್ತು, ಈ ಪ್ರಪಂಚದ ನಾಶವನ್ನೂ ಮಾಡುವಿ (ಶ್ರು-ಯತ್ಪ್ರಯಂತ್ಯಭಿಸಂವಿಶಂತಿ) ಆದರೆ ನೀನು ನಿತ್ಯನಾದುದರಿಂದ ನಾಶರಹಿತನಾಗಿದ್ದೀಯೆ (ಶ್ರು-ಅನಂತಮವ್ಯಕ್ತಂ....) ಲೋಕಕ್ಕಿಂತ ಪೂರ್ವದಲ್ಲಿ ನೀನೊಬ್ಬನೇ ಇದ್ದವನಾದುದರಿಂದ ನಿನ್ನಿಂದಲೇ ಈ ಪ್ರಪಂಚವು ಪ್ರಾರಂಭವಾಯಿತು (ಶ್ರು-ಆತ್ಮಾವಾ ಇದಮೇಕಮಗ್ರ ಆಸೀತ್ ” ಅಸದ್ವಾ ಇದಮಗ್ರಆಸೀತ್) ನಿನಗಿಂತ ಪೂರ್ವದಲ್ಲಿ ಯಾವವಸ್ತುವೂ ಇಲ್ಲದ್ದರಿಂದ ಅನಾದಿ

ಆಕಾಂಕ್ಷೆ—ನಿರೀಶ್ವರಃ, ಕಃ ? ತ್ವಂ, ಕಥಂಭೂತಃ ? ಜಗದೀಶಃ, ಜಗದಾದಿಃ, ಕಃ ? ತ್ವಂ, ಕಥಂಭೂತಃ ? ಅನಾದಿಃ, ಜಗದಂತಃ, ಕಃ ? ತ್ವಂ, ಕಥಂಭೂತಃ ? ನಿರಂತಕಃ, ಜಗದ್ಯೋನಿಃ, ಕಃ ? ತ್ವಂ, ಕಥಂಭೂತಃ ? ಅಯೋನಿಃ.

ವಿಗ್ರಹ:— (೧) ಜಗತಃ ಯೋನಿಃ-ಜಗದ್ಯೋನಿಃ (ಷ, ತ) (೨) ನವಿದ್ಯತೇಯೋನಿಃ ಯಸ್ಯಸಃ (ಷ. ಬ. ವ್ರೀ.) ಅಥವಾ - ನಯೋನಿಃ—

ಅಯೋನಿಃ (ನಞ್, ತ) (೩) ಜಗತಃ ಅಂತಃಜಗದಂತಃ (ಷ, ತ) (೪) ನವಿದ್ಯತೇ ಅಂತೋಯಸ್ಯಸಃ (ಷ, ಬ, ವ್ರೀ) ಅಥವಾ ಅಂತಯತೀತ್ಯಂತಕಃ (ಕೃ, ವೃ) ನ ಅಂತಕಃ-ನಿರಂತಕಃ (ನಞ್,ತ) (೬) ಜಗತಃ ಆದಿಃ-ಜಗದಾದಿಃ (ಷ,ತ) (೭) ನವಿದ್ಯತೇ ಆದಿಃ ಯಸ್ಯಸಃ (ಷ,ಬ) ಅಥವಾ ನ ಆದಿಃ (ನಞ್,ತ) (೯)ಜಗತಃ ಈಶಃ-ಜಗದೀಶಃ (ಷ,ತ)(೧೦) ನವಿದ್ಯತೇ ಈಶ್ವರಃ ಯಸ್ಯಸಃ (ಷ,ಬ,ವ್ರೀ)

ವಿಶೇಷ—(೪) ಅನಂತೋ ಜಗದಂತಕಃ (ಪಾ) (೫) ಅಂತಯತೀತ್ಯಾತಕಃ-ಪಚಾದಿ ಗಣಪಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯವು ಬಂತು. ಸ್ವಾರ್ಥದಲ್ಲಿ ಕ ಪ್ರತ್ಯಯವು ಸೇರಿ, ಅಂತಕಃ ಎಂದಾಯ್ತು (೭) ಸಮಾಸದಲ್ಲಿ 'ನಞ್' ನ ನಕಾರವು ಲೋಪವಾಗಿ ನ + ಆದಿಃ= ಅ + ಆದಿಃ ಎಂದಾಯ್ತು. ಇಲ್ಲಿ ಉತ್ತರಪದವು ಉಸ್ವರಾದಿಯಾಗಿರುವುದರಿಂದ ಆಕಾರಕ್ಕೆ ಪೂರ್ವದಲ್ಲಿ 'ನುಟ್', (೯) ಎಂಬಾಗಮವು ಬಂದು ಅನ್ + ಆದಿಃ= ಅನಾದಿಃ, ಎಂದಾಗಿದೆ. (೧೦) 'ಈಶ' ಧಾತುವಿನಮೋಲೆ ಸ್ವಭಾವಾರ್ಥದಲ್ಲಿ 'ಕ್ವರಚ್' ಪ್ರತ್ಯಯವು ಸೇರಿ 'ಈಶ್ವರಃ' ಎಂದಾಯ್ತು. ಈ ಶ್ಲೋಕದಲ್ಲಿ ಪ್ರತಿ ಒಂದು ವಾಕ್ಯದಲ್ಲಿಯೂ ಎರಡನೆಯ ಪದಗಳನ್ನು 'ನಞ್' ತತ್ಪುರುಷಮಾಡಿದರೆ ವಿರೋಧಾರ್ಥವೂ, ಬಹುವ್ರೀಹಿಯನ್ನು ಮಾಡಿದರೆ, ಆ ವಿರೋಧಕ್ಕೆ ಪರಿಹಾರವೂ ಉಂಟಾಗುವುದು. ಬಹುವ್ರೀಹಿಯಿಂದ ತನಗೆ ಕಾರಣರಾರೂ ಇಲ್ಲವೆಂಬರ್ಥವು ಬರುವುದರಿಂದ ವಿರೋಧವು ಪರಿಹಾರವಾಗುವುದು. ಹೀಗೆ ಎಲ್ಲಾ ವಾಕ್ಯಗಳನ್ನು ತಿಳಿಯಬೇಕು. ಹೀಗಿರುವುದರಿಂದ ಈ ಶ್ಲೋಕದಲ್ಲಿ ಒಟ್ಟು ನಾಲ್ಕು ವಿರೋಧಾಭಾಸಾಲಂಕಾರಗಳು ಬೇರೆಬೇರೆಯಾಗಿ ಒಂದನ್ನೊಂದು ಅಪೇಕ್ಷಿಸದೆ ಸ್ವತಂತ್ರಗಳಾಗಿರುವುದರಿಂದ ಸಂಸೃಷ್ಟಿಯು ॥೯॥

ಶ್ಲೋ॥ ಆತ್ಮಾನಮಾತ್ಮನಾವೇತ್ಸಿ ಸೃಜಸ್ಯಾತ್ಮಾನಮಾತ್ಮನಾ ।
ಆತ್ಮನಾ ಕೃತಿನಾ ಚ ತ್ವ ಮಾತ್ಮನ್ಯೇವ ಪ್ರಲೀಯಸೇ ॥೧೦॥

ಪದ—(೧) ಆತ್ಮಾನಂ (೨) ಆತ್ಮನಾ (೩) ವೇತ್ಸಿ (೪) ಸೃಜಸಿ (೫) ಆತ್ಮಾನಂ (೬) ಆತ್ಮನಾ (೭) ಆತ್ಮನಾ (೮) ಕೃತಿನಾ (೯) ಚ (೧೦) ತ್ವಂ (೧೧) ಆತ್ಮನಿ (೧೨) ಏವ (೧೩) ಪ್ರಲೀಯಸೇ.

ಶಬ್ದ—(೧,೫) ನ,ಪು,ದ್ವಿ,ಏ (೨,೬,೭) ನ,ಪು,ತೃ,ಏ (೩,೪,೧೩) ಕ್ರಿ (೮) ನ,ಪು,ತೃ,ಏ (ಇ‍ಕಾರಾಂತ) (೯,೧೨) ಅವ್ಯ (೧೧) ನ,ಪು,ಸ,ಏ.

ಅನ್ವಯ—ತ್ವಂ ಕೃತಿನಾ (ಎಲ್ಲಾ ವಾಕ್ಯಗಳಲ್ಲಿಯೂ ಅಧ್ಯಾಹಾರ್ಯಗಳು) ಆತ್ಮನಾ ಆತ್ಮಾನಂವೇತ್ಸಿ, ಆತ್ಮನಾ ಆತ್ಮನಂ ಸೃಜಸಿ, ಆತ್ಮನಾ ಆತ್ಮನ್ಯೇವ ಪ್ರಲೀಯಸೇಚ.

ಅರ್ಥ—ತ್ವಂ-ನೀನು, ಕೃತಿನಾ-ಸಮರ್ಥನಾದ, ಆತ್ಮನಾ-ಸ್ವರೂಪದಿಂದ, ಆತ್ಮಾನಂ-ನಿನ್ನನ್ನು, ವೇತ್ಸಿ-ತಿಳಿಯುತ್ತೀಯೆ, ಆತ್ಮನಾ-ಸ್ವರೂಪದಿಂದ, ಆತ್ಮಾನಂ-ನಿನ್ನನ್ನು, ಸೃಜಸಿ-ಸೃಷ್ಟಿಸುತ್ತೀಯೆ, ಆತ್ಮನಾ—ಸ್ವಸ್ವರೂಪದಿಂದ, ಆತ್ಮನ್ಯೇವ-ನಿನ್ನಲ್ಲಿಯೇ, ಪ್ರಲೀಯಸೇಚ - ಅಡಗುತ್ತೀಯೆ.

ತಾತ್ಪರ್ಯ—ಎಲೈ ಭಗವಂತನೇ! ಲೋಕಾನುಗ್ರಹಾರ್ಥವಾಗಿ ಬ್ರಹ್ಮನನ್ನು ಸೃಷ್ಟಿಸಬೇಕೆಂಬ ನಿನ್ನ ಅಪೇಕ್ಷೆಯನ್ನು ನಿನ್ನಿಂದ ನೀನೆ ತಿಳಿಯುತ್ತೀಯೆ, ನಿನ್ನನ್ನು ನಿನ್ನಲ್ಲಿಯೇ ಸೃಷ್ಟಿಸುತ್ತೀಯೆ (ಶ್ರು-ಸ್ವೇಮಹಿಮ್ನಿಪ್ರತಿಷ್ಠಿತಂ) ನಿನ್ನ ಸ್ವರೂಪದಲ್ಲಿಯೇ ನೀನು ಲಯವನ್ನು ಪಡೆಯುತ್ತೀಯೆ. ಅಂದರೆ—ಜಗತ್ಸೃಷ್ಟಿ ಸ್ಥಿತಿ ಸಂಹಾರಗಳನ್ನು ಆಲೋಚನಾಪೂರ್ವಕವಾಗಿ ನಿನ್ನಲ್ಲಿ ನೀನೇ ಮಾಡುತ್ತಿದ್ದೀಯಲ್ಲದೆ ನಿನ್ನನ್ನುಳಿದ ಪ್ರಪಂಚವು ಮಾತ್ರವಿರುವುದು. ನೀನೊಬ್ಬನೇ ಈ ಪ್ರಪಂಚರೂಪನಾಗಿ ಪರಿಣಮಿಸಿರುವೆಯಲ್ಲದೆ ಪ್ರಪಂಚೋತ್ಪತ್ತಿಸ್ಥಿತಿಗೆ ಪರಾಪೇಕ್ಷೆ ಇಲ್ಲವೆಂಬ ಭಾವವು.

ಆಕಾಂಕ್ಷೆ—ಪ್ರಲೀಯಸೇಚ. ಕಃ? ತ್ವಂ,(ಅ,ಪ್ರ) ಕಸ್ಮಿನ್ನೇವ? ಆತ್ಮನ್ಯೇವ. ಕೇನ? ಆತ್ಮನಾ, ಸೃಜಸಿ, ಕಃ? ತ್ವಂ, ಕಂ? ಆತ್ಮಾನಂ (ಪ.ಪ್ರ) ಕೇನ? ಆತ್ಮನಾ, ವೇತ್ಸಿ, ಕಃ? ತ್ವಂ, ಕಂ? ಆತ್ಮಾನಂ, ಕಥಂಭೂತೇನಾತ್ಮನಾ? ಕೃತಿನಾ.

ಧಾತುರೂಪ—(೩) ವೇತ್ತಿ, ವಿತ್ತಃ, ವಿದಂತಿ,
ವೇತ್ಸಿ, ವಿತ್ಥಃ, ವಿತ್ಥ,
ವೇದ್ಮಿ, ವಿದ್ವಃ, ವಿದ್ಮಃ,

ಧಾತ್ವರ್ಥ—(ವಿದ-ಜ್ಞಾನೇ) ತಿಳಿವಳಿಕೆ, ಎಂಬರ್ಥವುಳ್ಳ 'ಅದಾದಿ'

ಎರಡನೆಯ ಗಣದ ಪರಸ್ಮೈಪದಿ 'ವಿದ' ಎಂಬ ಧಾತುವು ಲಟ್ ಲಕಾರದ ವರ್ತಮಾನಕಾಲದ ಮಧ್ಯಮಪುರುಷೈಕವಚನದಲ್ಲಿದೆ.

ಧಾತುರೂಪ—(೪) ಸೃಜತಿ, ಸೃಜತಃ, ಸೃಜಂತಿ,
ಸೃಜಸಿ, ಸೃಜಥಃ, ಸೃಜಥ,
ಸೃಜಾಮಿ, ಸೃಜಾವಃ, ಸೃಜಾಮಃ,

ಧಾತ್ವರ್ಥ —(ಸೃಜ-ವಿಸರ್ಗೇ) ಸೃಷ್ಟಿಸುವಿಕೆ, ಎಂಬರ್ಥವುಳ್ಳ 'ತುದಾದಿ' ಆರನೆಯ ಗಣದ ಪರಸ್ಮೈಪದಿ 'ಸೃಜ' ಎಂಬ ಧಾತುವು ಲಟ್ ಲಕಾರದ ವರ್ತಮಾನಕಾಲದ ಮಧ್ಯಮಪುರುಷೈಕವಚನದಲ್ಲಿದೆ.

ಧಾತುರೂಪ—(೧೩) ಪ್ರಲೀಯತೇ, ಪ್ರಲೀಯೇತೇ, ಪ್ರಲೀಯಂತೆ
ಪ್ರಲೀಯಸೇ, ಪ್ರಲೀಯೇಥೇ, ಪ್ರಲೀಯಧ್ವೇ
ಪ್ರಲೀಯೇ, ಪ್ರಲೀಯಾವಹೇ, ಪ್ರಲೀಯಾಮಹೆ

ಧಾತ್ವರ್ಥ– (ಲೀಙ್-ಶ್ಲೇಷಣೇ) ಕೂಡಿಕೊಳ್ಳುವಿಕೆ, ಎಂಬರ್ಥವುಳ್ಳ 'ದಿವಾದಿ' ನಾಲ್ಕನೆಯಗಣದ ಆತ್ಮನೇಪದಿ ಲಿಙ್ ಎಂಬ ಧಾತುವಿಗೆ ಪ್ರ ಎಂಬುಪಸರ್ಗವು ಸೇರಿ 'ಅಡಗಿಹೋಗುವಿಕೆ' ಎಂಬರ್ಥವುಳ್ಳದ್ದಾಗಿ ಲಟ್ ಲಕಾರದ ವರ್ತಮಾನಕಾಲದ ಮಧ್ಯಮಪುರುಷೈಕವ॥

ವಿಶೇಷ—(೧) ಆತ್ಮಾ-ಪ್ರಯತ್ನ, ಧೈರ್ಯ, ಮನಸ್ಸು, ಸ್ವಭಾವ, ಪರಮಾತ್ಮ, ಜೀವ, ಬುದ್ಧಿ, ದೇಹ ಇವು ನಾನಾರ್ಥಗಳು. (೨) ಪ್ರಕೃತ್ಯಾದಿ ಗಣದಲ್ಲಿ 'ಆತ್ಮನ್, ಶಬ್ದವು ಸೇರಿರುವುದರಿಂದ, ಕರ್ತ್ರರ್ಥದಲ್ಲಿ ತೃತೀಯಾವಿಭಕ್ತಿ ಬಂದಿದೆ. (೮) ಕೃತೀ= ಕೃತಕೃತ್ಯನು, ವಿದ್ವಾಂಸನು, ಕುಶಲನು, ಇವು ನಾನಾರ್ಥಗಳು. (೧೩) ಪ್ರಪಂಚದಂತೆ, ಪರಬ್ರಹ್ಮನಿಗೆ ಜ್ಞಾನೋತ್ಪತ್ತಿಲಯ (ಆಲೋಚನೆ, ಸೃಷ್ಟಿಸಂಹಾರ) ಗಳಲ್ಲಿ ಪರಾಪೇಕ್ಷೆ ಇಲ್ಲವೆಂಬ ಭಾವವು ॥೧೦॥

ಶ್ಲೋ॥ ದ್ರವಸ್ಸಂಘಾತಕಠಿನಃ ಸ್ಥೂಲಃ ಸೂಕ್ಷ್ಮೋಲಘುರ್ಗುರುಃ ।
ವ್ಯಕ್ತೋ ವ್ಯಕ್ತೇತರ ಶ್ಚಾಸಿ ಪ್ರಾಕಾಮ್ಯಂ ತೇ ವಿಭೂತಿಷು ॥

ಪದ—(೧) ದ್ರವಃ (೨) ಸಂಘಾತಕಠಿನಃ [೩] ಸ್ಥೂಲಃ (೪) ಸೂಕ್ಷ್ಮಃ (೫) ಲಘುಃ (೬) ಗುರುಃ (೭) ವ್ಯಕ್ತಃ (೮) ವ್ಯಕ್ತೇತರಃ

(೯) ಚ (೧೦) ಅಪಿ (೧೧) ಪ್ರಾಕಾಮ್ಯಂ (೧೨)ತೇ(೧೩)ವಿಭೂತಿಷು.

ಶಬ್ದ—(೧,೨,೩,೪,೫,೮) ಅ,ಪು,ಪ್ರ,ಏ (೬,೭) ಉ,ಪು,ಪ್ರ,ಏ, (೯) ಅವ್ಯ (೧೦) ಕ್ರಿ (೧೧) ಅ,ನ,ಪ್ರ,ಏ (೧೨) ದ,ಪು, ಷ, ಏ (೧೩) ಇ,ಸ್ತ್ರೀ,ಸ,ಬ.

ಅನ್ವಯ—(ತ್ವಂ) ದ್ರವಃ, ಸಂಘಾತಕಠಿನಃ, ಸ್ಥೂಲಃ, ಸೂಕ್ಷ್ಮಃ ಲಘುಃ, ಗುರುಃ, ವ್ಯಕ್ತಃ, ವ್ಯಕ್ತೇತರಶ್ಚ ಅಪಿ, ತೇ ವಿಭೂತಿಷು ಪ್ರಾಕಾಮ್ಯಂ.

ಅರ್ಥ—ತ್ವಂ-ನೀನು, ದ್ರವಃ-ರಸರೂಪನೂ, ಸಂಘಾತಃ-ಬಲವತ್ತರವಾದ ಸೇರುವಿಕೆಯಿಂದ, ಕಠಿನಃ-ಗಟ್ಟಿಯಾದವನೂ, ಸ್ಥೂಲಃ-ಇಂದ್ರಿಯಗಳಿಗೆ ಗೋಚರನಾಗುವಷ್ಟು ಗಾತ್ರವುಳ್ಳವನಾಗಿಯೂ, ಸೂಕ್ಷ್ಮಃ-ಇಂದ್ರಿಯಗಳಿಗೆ ಗೋಚರನಾಗದಷ್ಟು ಗಾತ್ರವುಳ್ಳವನಾಗಿಯೂ, (ಸಣ್ಣಗೆ) ಲಘುಃ-ತೂಕದಲ್ಲಿ ಬಹಳ ಕಡಿಮೆಯಾದವನಾಗಿಯೂ, ಗುರುಃ ಅತ್ಯಂತ ಭಾರದವನಾಗಿಯೂ, ವ್ಯಕ್ತಃ-ಕಾರ್ಯರೂಪನಾಗಿಯೂ ಅವ್ಯಕ್ತಶ್ಚ- ಕಾರಣರೂಪನಾಗಿಯೂ, ಅಪಿ - ಆಗಿರುತ್ತೀಯೆ, ತೇ-ನಿನಗೆ, ವಿಭೂತಿಷು-ಅಣಿಮಾದಿ ಅಷ್ಟಸಿದ್ಧಿಗಳಲ್ಲಿ, ಪ್ರಾಕಾಮ್ಯಂ-ಇಷ್ಟಾಪತ್ತಿಯು (ಸ್ವಾತಂತ್ರ್ಯವು).

ತಾ॥ ಎಲೈ ಪರಮಾತ್ಮನೇ! ನೀನು—ಅಲ್ಪವಾದ ಸ್ನೇಹಾಕರ್ಷಣೆಯುಳ್ಳ ನೀರು ಮೊದಲಾದವುಗಳಂತೆ ಮೃದುವಾಗಿಯೂ ಇರುತ್ತೀಯೆ ಇಂದ್ರಿಯಗಳಿಗೆ ಗೋಚರವಾಗುವ ಘಟ, ಪಟಾದಿಗಳಂತೆ ಸ್ಥೂಲನಾಗಿಯೂ, ಅತೀಂದ್ರಿಯನಾಗಿ ಪರಮಾಣುಗಳಂತೆ ಅತ್ಯಂತ ಸೂಕ್ಷ್ಮರೂಪಿಯಾಗಿಯೂ ಇದ್ದೀಯೆ, ತೂಕದಲ್ಲಿ ಬಹಳ ಕಡಮೆಯಾಗಿರುವ ಅರಳೆ ಮುಂತಾದವುಗಳಂತೆ ಅಚಲ (ಅಲ್ಲಾಡಿಸುವದಕ್ಕೆ ಶಕ್ಯ) ನಾಗಿಯೂ ಇರುವಿ. ಕಾರ್ಯರೂಪವಾದ ಜಗತ್ತಿನಲ್ಲಿ ಕಾಣಬರುವುದರಿಂದ ವ್ಯಕ್ತ (ಸ್ಫುಟ) ನಾಗಿಯೂ, ಕಾರಣರೂಪದಲ್ಲಿದ್ದು ತೋರಿಬಾರದ್ದರಿಂದ ಅವ್ಯಕ್ತನಾಗಿಯೂ ಇರುವಿ. ಇಂತಹ ಶಕ್ತಿಯುಳ್ಳವನಾದುದರಿಂದ ಅಣಿಮಾದ್ಯಷ್ಟಸಿದ್ಧಿಗಳು ನಿನ್ನ ಸ್ವಾಧೀನದಲ್ಲಿರುವವು.

ಆಕಾಂಕ್ಷೆ—ಪ್ರಾಕಾಮ್ಯಂ, ಕಸ್ಯ ? ತೇ, ಕಾಸು ? ವಿಭೂತಿಷು,

ಅಸಿ, ಕಃ? ತ್ವಂ, (ಅ,ಪ್ರ) ಕಥಂಭೂತಃ? ವ್ಯಕ್ತೇತರಃ, ಪುನಃ ಕಥಂ ಭೂತಃ (೬ ಸಾರಿ) ಗುರುಃ, ಲಘುಃ, ಸೂಕ್ಷ್ಮಃ, ಸ್ಥೂಲಃ, ಸಂಘಾತ ಕಠಿನಃ, ದ್ರವಃ.

ವಿಗ್ರಹ—(೨) ಸಂಘಾತೇನ ಕಠಿನಃ-ಸಂಘಾತಕಠಿನಃ (ತೃ, ತ) (೪) ವ್ಯಕ್ತಾತ್ ಇತರಃ-ವ್ಯಕ್ತೇತರಃ (ಪಂಚ, ತ)

ಧಾತುರೂಪ—(೧೦) ಅಸ್ತಿ: ಸ್ತಃ, ಸಂತಿ,
ಅಸಿ, ಸ್ಥಃ, ಸ್ಥ,
ಅಸ್ಮಿ, ಸ್ವಃ, ಸ್ಮಃ,

ಧಾತ್ವರ್ಥ—(ಅಸ-ಭುವಿ) ಇರುವಿಕೆ ಎಂಬರ್ಥವುಳ್ಳ ಅಸ ಎಂಬ ಅದಾದಿ ಎರಡನೆಯಗಣದ ಪರಸ್ಮೈಪದ ಧಾತುವು ಲಟ್ ಲಕಾರದ ವರ್ತಮಾನಕಾಲದ ಮಧ್ಯಮಪುರುಷೈಕ ವಚನರೂಪದಲ್ಲಿದೆ.

ವಿಶೇಷ—(೧) 'ದ್ರು' ಧಾತುವಿನಮೇಲೆ ಅಚ್ ಪ್ರತ್ಯಯವು ಬಂದಿದೆ. (೬) ವಿ ಎಂಬುಪಸರ್ಗಪೂರ್ವಕವಾದ ಅಞ್ಜ ಧಾತುವಿಗೆ ಕ್ತ ಪ್ರತ್ಯಯವು ಕೂಡಿದೆ. (೮) ಇತರ ಶಬ್ದಯೋಗದಿಂದ ಪಂಚಮೀ ವಿಭಕ್ತಿ ಬರುತ್ತದೆ. (೧೧) ಪ್ರಕಾಮಶಬ್ದದಮೇಲೆ ಭಾವಾರ್ಥದಲ್ಲಿ ಯತ್ ಪ್ರತ್ಯಯವು ಬಂತು. ಅಷ್ಟಸಿದ್ಧಿಗಳು, ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ (೧೩) ಭೂ ಧಾತುವಿಗೆ ಭಾವಾರ್ಥದಲ್ಲಿ ಸ್ತ್ರೀಲಿಂಗದಲ್ಲಿ ಕ್ತಿನ್ ಪ್ರತ್ಯಯವು ಬಂದಿದೆ. ಈ ಶ್ಲೋಕದಲ್ಲಿ ಭಗವಂತನಲ್ಲಿ ಪರಸ್ಪರ ವಿರೋಧವುಳ್ಳ ಧರ್ಮಗಳೆರಡೆರಡು ಕೂಡಿವೆ ಎಂದು ಹೇಳುವುದು ಅಸಂಗತವೆಂದು ಕಂಡುಬರುವುದಾದರೂ, ಆತನ ಮಹಿಮಾತಿಶಯದಿಂದ ಎಲ್ಲವೂ ಸಾಧ್ಯಗಳಾಗಿವೆ. ಎಂದು ತಿಳಿಯಬೇಕು ॥೧೧॥

ಶ್ಲೋ॥ ಉದ್ಘಾತಃ ಪ್ರಣವೋಯಾಸಾಂ ನ್ಯಾಯ್ಯೈಸ್ತ್ರಿಭಿರುದೀರಣಂ ।
ಕರ್ಮಯಜ್ಞಃ ಫಲಂ ಸ್ವರ್ಗಸ್ತಾಸಾಂತ್ವಂ ಪ್ರಭವೋಗಿರಾಂ ॥

ಪದ—(೧) ಉದ್ಘಾತಃ (೨) ಪ್ರಣವಃ (೩) ಯಾಸಾಂ (೪) ನ್ಯಾಯ್ಯೈಃ (೫) ತ್ರಿಭಿಃ (೬) ಉದೀರಣಂ (೭) ಕರ್ಮ (೮) ಯಜ್ಞಃ (೯) ಫ

ಲಂ (೧೦] ಸ್ವರ್ಗಃ (೧೧) ತಾಸಾಂ (೧೨) ತ್ವಂ (೧೩) ಪ್ರಭವಃ (೧೪) ಗಿರಾಂ.

ಶಬ್ದ—(೧.೨,೮,೧೦,೧೩) ಅ,ಪು,ಪ್ರ,ಏ, (೩,೧೧) ದ,ಸ್ತ್ರೀ,ಷ,ಬ, (೪] ಅ,ಪು,ತೃ,ಬ (೫) ಇ,ಪು,ತೃ,ಬ (೬,೯) ಅ,ನ,ಪ್ರ,ಏ (೭] ನ,ನ,ಪ್ರ ಏ (೧೨) ದ,ಪು,ಪ್ರ,ಏ (೧೪) ರ,ಸ್ತ್ರೀ,ಷ,ಬ.

ಅನ್ವಯು—ಯಾಸಾಂಗಿರಾಂ ಉದ್ಘಾತಃ ಪ್ರಣವಃ, ತ್ರಿಭಿಃನ್ಯಾಯ್ಯೈಃ ಉದೀರಣಂ, ಕರ್ಮಯಜ್ಞಃ, ಫಲಂಸ್ವರ್ಗ, ತಾಸಾಂಗಿರಾಂತ್ವಂ ಪ್ರಭವಃ (ಅಸಿ)

ಅರ್ಥ—ಯಾಸಾಂ-ಯಾವ, ಗಿರಾಂ-ವಾಕ್ಯಗಳಿಗೆ, ಉದ್ಘಾತಃ-ಪ್ರಾರಂಭವು (ಸಮಾಪ್ತಿಯು) ಪ್ರಣವಃ-ಓಂಕಾರವೋ! ತ್ರಿಭಿಃ-ಮೂರುಬಗೆಯಾದ, ನ್ಯಾಯ್ಯೈಃ-ಸ್ವರಗಳಿಂದ, ಉದೀರಣಂ-ಉಚ್ಚಾರಣೆಯೊ, ಕರ್ಮ-(ವಿಧಿಸಹಿತಕ್ಕ) ಕರ್ಮವು, ಯಜ್ಞಃ-(ಜ್ಯೋತಿಷ್ಟೋಮಾದಿ) ಯಜ್ಞವೋ, ಫಲಂ-ಪ್ರಯೋಜನವು, ಸ್ವರ್ಗಃ-ಸ್ವರ್ಗಲೋಕಪ್ರಾಪ್ತಿಯೋ, ತಾಸಾಂ-ಅಂತಹ, ಗಿರಾಂ-ವಾಕ್ಯಗಳಿಗೆ (ವೇದಗಳಿಗೆ), ತ್ವಂ-ನೀನು, ಪ್ರಭವಃ-ಉತ್ಪತ್ತಿಸ್ಥಾನನು, (ಅಸಿ-ಆಗಿರುತ್ತಿ).

ತಾ|| ಎಲೈ ಭಗವಂತನೇ! ಯಾವ ವಾಕ್ಯಗಳ ಆರಂಭ ಮತ್ತು ಪರಿಸಮಾಪ್ತಿಯು (ಎಂದರೆ ಎತ್ತುಕಡಿ ಮುಕ್ತಾಯ) ಓಂಕಾರವೋ, ಆವ ವಾಕ್ಯಗಳ ಉಚ್ಚಾರಣೆಯು ಉದಾತ್ತಾನುದಾತ್ತ ಸ್ವರಿತಗಳಿಂದಲೋ, ಮತ್ತಾವ ವಾಕ್ಯಗಳಿಂದ ಹೇಳಲ್ಪಡುವ ಕರ್ಮವು ಯಜ್ಞವೋ, ಆ ಕರ್ಮಕ್ಕೆ ಫಲವು ಸ್ವರ್ಗವೋ ಮತ್ತು ಜ್ಞಾನದ್ವಾರಾ ಮುಕ್ತಿಯೋ, ಅಂತಹ ವೇದವಾಕ್ಯಗಳಿಗೆ ಕಾರಣವು (ಸ್ಮರ್ತನು) ನೀನೇ ಆಗಿದ್ದೀಯೆ.

ಆಕಾಂಕ್ಷೆ—ಅಸಿ. ಕಃ-ಯಾರು?, ತ್ವಂ (ಅ,ಪ್ರ) ಕಃ-ಏನು?, ಪ್ರಭವಃ. ಕಾಸಾಂ-ಯಾವವುಗಳಿಗೆ?, ಗಿರಾಂ. ಸ್ವರ್ಗಃ. ಕಿಂ-ಏನು?, ಫಲಂ. ಕಃ-ಯಾವುದು?, ಯಜ್ಞಃ. ಕಿಂ-ಏನು? ಕರ್ಮ. ಉದೀರಣಂ. ಕೈಃ—ಯಾವವುಗಳಿಂದ?, ನ್ಯಾಯ್ಯೈಃ. ಕಥಂಭೂತೈಃ ನ್ಯಾಯ್ಯೈಃ-ಎಂತಹ ನ್ಯಾಯಗಳಿಂದ?, ತ್ರಿಭಿಃ. ಪ್ರಣವಃ. ಕಥಂಭೂತಃ-ಎಂಥದು?, ಉದ್ಘಾತಃ.

ವಿಗ್ರಹ—ಪ್ರಭವತ್ಯಸ್ಮಾದಿತಿ-ಪ್ರಭವಃ, ನೀಯನ್ತೇ ಏಭಿರಿತಿ ನ್ಯಾಯಾಃ-ಸ್ವರಾಃ.

ವಿಶೇಷ—ಓಂಕಾರಃ, ಪ್ರಣವಃ, ಸಮ. ಅಭ್ಯಾದಾನಂ, ಉದ್ಘಾತಃ, ಆರಂಭಃ, ಸಮ. "ಬ್ರಹ್ಮಣಃ ಪ್ರಣವಂ ಕುರ್ಯಾದಾದಾವಂತೇಚ ಸರ್ವತಃ । ದಹತ್ಯೇನಃ ಕೃತಂ ಪೂರ್ವಂ ಪರಸ್ತಾಚ್ಚ ವಿಶೇಷತಃ" ಮೊದಲು ಓಂಕಾರವನ್ನು ಉಚ್ಚರಿಸಿ ವೇದವನ್ನು ಆರಂಭಿಸಬೇಕು. ಮುಗಿಸುವಾಗಲೂ ಹಾಗೆಯೇ. ಇದರಿಂದ ಮೊದಲು ಪಾಪವು ಪರಿಹರವಾಗಿ ತರುವಾಯ ವಿಶೇಷಫಲ ಉಂಟಾಗುವುದು ಎಂದು ನಿರುಕ್ತ ಪರಿಶಿಷ್ಟಗಳಲ್ಲಿ ಯಾಸ್ಕನು. (೪) ಸ್ವರವಿಶೇಷದಿಂದ ಅರ್ಥವಿಶೇಷವುಂಟು. "ಯಥೇನ್ದ್ರಶತ್ರುಸ್ಸ್ವರತೋಽಪರಾಧಾತ್" ಸ್ವರಭೇದದಿಂದ ಅರ್ಥಭೇದವುಂಟಾಗಿ ತ್ವಾಷ್ಟ್ರನು ಹತನಾದನು. "ಓಂಕಾರಶ್ಚಾಥಶಬ್ದಶ್ಚ ದ್ವಾವೇತೌ ಬ್ರಹ್ಮಣಃಪುರಾ । ಕಂಠಂಭಿತ್ವಾ ವಿನಿರ್ಯಾತೌ ತಸ್ಮಾನ್ಮಾಂಗಳಿ ಕಾವುಭೌ॥" ಓಂಕಾರ ಮತ್ತು ಅಥ ಶಬ್ದ ಇವೆರಡೂ ಪೂರ್ವದಲ್ಲಿ ಬ್ರಹ್ಮನ ಕೊರಳನ್ನು ಭೇದಿಸಿ ಹೊರಟುಬಂದವು, ಇವೆರಡೂ ಶಬ್ದದಿಂದಲೂ ಅರ್ಥದಿಂದಲೂ ಶುಭಪ್ರದಗಳು. ಸಾಂಖ್ಯಮತವನ್ನನುಸರಿಸಿ ಸ್ತುತಿಸುತ್ತಾರೆ ॥೧೨॥

ಶ್ಲೋ॥ ತ್ವಾಮಾಮನನ್ತಿ ಪ್ರಕೃತಿಂ ಪುರುಷಾರ್ಥ ಪ್ರವರ್ತಿನೀಂ ।
ತ್ವದ್ದರ್ಶಿನ ಮುದಾಸೀನಂ ತ್ವಾಮೇವ ಪುರುಷಂ ವಿದುಃ ॥೧೩॥

ಪದ—(೧) ತ್ವಾಂ (೨) ಆಮನನ್ತಿ (೩) ಪ್ರಕೃತಿಂ (೪) ಪುರುಷಾರ್ಥಪ್ರವರ್ತಿನೀಂ (೫) ತ್ವದ್ದರ್ಶಿನಂ (೬) ಉದಾಸೀನಂ (೭) ತ್ವಾಂ (೮) ಏವ (೯) ಪುರುಷಂ (೧೦) ವಿದುಃ.

ಶಬ್ದ—(೧,೭) ದ,ಪು,ದ್ವಿ,ಏ (೨,೧೦) ಕ್ರಿ (೩) ಇ,ಸ್ತ್ರೀ,ದ್ವಿ,ಏ (೪) ಈ,ಸ್ತ್ರೀ,ದ್ವಿ,ಏ (೫) ನ,ಪು,ದ್ವಿ,ಏ (೬,೯)ಅ,ಪು,ದ್ವಿ,ಏ(೮) ಅವ್ಯ.

ಅನ್ವಯ—ತ್ವಾಂ ಪುರುಷಾರ್ಥ ಪ್ರವರ್ತಿನೀಂ ಪ್ರಕೃತಿಂ ಆಮನನ್ತಿ. ತ್ವಾಮೇವ ತ್ವದ್ದರ್ಶಿನಂ ಉದಾಸೀನಂ ಪುರುಷಂ ವಿದುಃ.

ಅರ್ಥ—(ಮುನಯಃ-ಮಹರ್ಷಿಗಳು), ತ್ವಾಂ-ನಿನ್ನನ್ನು, ಪುರುಷಾರ್ಥ-ಸ್ವರ್ಗಮೋಕ್ಷಗಳಿಗೋಸ್ಕರ, ಪ್ರವರ್ತಿನೀಂ-ಪ್ರವರ್ತಿಸುತ್ತಿರು

ವ, ಪ್ರಕೃತಿಂ-ಮೂಲಪ್ರಕೃತಿಯನ್ನಾಗಿ (ತ್ರಿಗುಣಾತ್ಮಕವಾದ ಮೂಲ ಕಾರಣವನ್ನಾಗಿ), ಆಮನಂತಿ-ಹೇಳುತ್ತಾರೆ. ತ್ವಾಮೇವ - ನಿನ್ನನ್ನೇ, ತತ್-ಆ ಪ್ರಕೃತಿಯನ್ನು, ದರ್ಶಿನಂ - ಸಾಕ್ಷಿಯಾಗಿ ನೋಡುತ್ತಿರುವ, ಉದಾಸೀನಂ-ಕೂಟಸ್ಥನಾದ, ಪುರುಷಂ-ಪುರುಷನನ್ನಾಗಿ (ಮೂಲಭೂತನನ್ನಾಗಿ) ವಿದುಃ-ತಿಳಿಯುತ್ತಾರೆ.

ತಾ॥ ಮುನಿಗಳು ಚೇತನರಿಗೆ ಸ್ವರ್ಗಮೋಕ್ಷಗಳನ್ನು ಕಲ್ಪಿಸಲಿಕ್ಕಾಗಿ ಹೊರಡುತ್ತಿರುವ ಸತ್ವರಜಸ್ತಮೋಗುಣ ಸ್ವರೂಪವಾದ ಪ್ರಕೃತಿಯು ನೀನೇ ಎಂದು ಹೇಳುತ್ತಾರೆ. ಮತ್ತು—ಯಾವ ಕೆಲಸಕ್ಕೂ ಹೋಗದೆ ಆ ಪ್ರಕೃತಿಯನ್ನು ನೋಡುತ್ತಾ ಕೂಟಸ್ಥನೆನಿಸಿರುವವನೂ ನೀನೇ ಎಂದು ತಿಳಿದಿದ್ದಾರೆ.

ಆಕಾಂಕ್ಷೆ—ವಿದುಃ. ಕೇ-ಯಾರು?, ಮುನಯಃ. ಕಂ-ಯಾರನ್ನು? ತ್ವಾಮೇವ (ಸ, ಪ್ರ) ಏನನ್ನಾಗಿ?, ಪುರುಷಂ. ಕಥಂಭೂತಂ ಪುರುಷಂ-ಉದಾಸೀನಂ, ಪುನಃ ಕಥಂಭೂತಂ-ತ್ವದ್ದರ್ಶಿನಂ. ಆಮನಂತಿ. ಕೇ-ಯಾರು?, ಮುನಯಃ. ಕಂ-ಯಾರನ್ನು?, ತ್ವಾಂ. (ಸ, ಪ್ರ) ಕಾಂ-ಏನನ್ನಾಗಿ?, ಪ್ರಕೃತಿಂ. ಕಥಂಭೂತಾಂ ಪ್ರಕೃತಿಂ-ಪುರುಷಾರ್ಥಪ್ರವರ್ತಿನೀಂ.

ವಿಗ್ರಹ—(೪) ಪುರುಷಸ್ಯಅರ್ಥಃ (ಷ,ತ) ಪುರುಷಾರ್ಥಃ ಪ್ರವರ್ತಯತಿ ಇತಿ (ಕೃ,ವೃ) + ತಾಂ (೫) ತಾಂಪಶ್ಯತಿ ಇತಿ (ಕೃ,ವೃ) + ತಂ (೬) ಉದಾಸ್ತೆ ಇತಿ (ಕೃ,ವೃ) + ತಂ (೭) ಪುರಿ—ಹೃದಯಾಕಾಶೆ, ಶೇತೆ ಇತಿ (ಕೃ,ವೃ).

ಧಾತುರೂಪ—ಆಮನತಿ, ಆಮನತಃ, ಆಮನಂತಿ,
ಆಮನಸಿ, ಆಮನಥಃ, ಆಮನಥ,
ಆಮನಾಮಿ, ಆಮನಾವಃ, ಆಮನಾಮಃ,

ಧಾತ್ವರ್ಥ—(ಮ್ನಾ-ಅಭ್ಯಾಸೆ) ಅಭ್ಯಾಸ ಎಂಬರ್ಥದಲ್ಲಿರುವ ಭ್ವಾದಿ ಮೊದಲನೆಯಗಣ, ಪರಸ್ಮೈಪದಿ, ಸಕರ್ಮಕ, ಮ್ನಾ, ಎಂಬ ಧಾತುವು ಆ ಎಂಬ ಉಪಸರ್ಗದಿಂದೊಡಗೂಡಿ ಹೇಳುವುದು ಎಂಬ ಅರ್ಥವುಳ್ಳದ್ದಾಗಿ ವರ್ತಮಾನ, ಲಟ್, ಪ್ರ, ಬ.

ವೇದ, ವಿದತುಃ, ವಿದುಃ, ವೇತ್ತಿ, ವಿತ್ತಃ, ವಿದಂತಿ
ವೇತ್ಥ, ವಿದಥುಃ, ವಿದ, ವೇತ್ಸಿ, ವಿತ್ಥಃ, ವಿತ್ಥ
ವೇದ, ವಿದ್ವ, ವಿದ್ಮ. ವೇದ್ಮಿ ವಿದ್ವಃ, ವಿದ್ಮಃ.

ಧಾತ್ವರ್ಥ—(ವಿದ-ಜ್ಞಾನೆ) ತಿಳಿವು ಎಂಬ ಅರ್ಥದಲ್ಲಿರುವ ಅದಾದಿ ಎರಡನೆಯ ಗಣ, ಸಕರ್ಮಕ, ಪರಸ್ಮೈಪದಿ, ವರ್ತಮಾನ ಲಟ್ ಪ್ರ, ಬ. ಈ ಧಾತುವಿಗೆ ಲಟ್ ಲಿಟ್, ಲೋಟ್, ಈ ಮೂರರಲ್ಲಿಯೂ ರೂಪದ್ವಯವೆಂದು ತಿಳಿಯಬೇಕು. ಲಿಟ್-ವಿವೇದ, ವಿದಾಂಚಕಾರ, ವಿದಾಂಬಭೂವ, ವಿದಾಮಾಸ. ಲೋಟ್-ವಿದಾಂಕರೋತು, ವಿದಾಂ ಕುರುತಾತ್, ವೇತ್ತು, ವಿತ್ತಾತ್. ಲಿಟ್-ವಿವೇದ. ಲಙ್-ಅವೇತ್, ವಿಧಿಲಿಙ್-ವಿದ್ಯಾತ್, ಆಶೀರ್ಲಿಙ್-ವಿದ್ಯಾತ್. ಲುಙ್-ಅವೇದಿಷ್ಯತ್. ಇತ್ಯಾದಿ.

ವಿಶೇಷ—ಪ್ರಕೃತಿಃ, ಇದು-ಪಂಚಭೂತಗಳು, ಪ್ರಧಾನ, ಮೂಲಕಾರಣ, ಸ್ವಭಾವ, ಪ್ರಭೆ, ಎಂಬ ಅರ್ಥದಲ್ಲಿದೆ (೨) ಮನಾದೇಶ ಬಂದಿದೆ ‹‹ಅಜಾಮೇಕಾಂಲೋಹಿತ ಶುಕ್ಲಕೃಷ್ಣಾಂ ಬಹ್ವೀಂಪ್ರಜಾಂ ಜನಯಂತೀಂಸ್ವರೂಪಾಂ ಅಜೋಹ್ಯೇಕೋ ಜುಷಮಾಣೋನುಶೇತೆ ಜಹಾತ್ಯೇನಾಂ ಭುಕ್ತಭೋಗಾಮಜೋನ್ಯಃ ’’ ಕೆಂಪು, ಬಿಳುಪು,ಕಪ್ಪು ಬಣ್ಣಗಳುಳ್ಳುದಾಗಿ, ತನಗೆ ಸಮಾನವಾದ ಸಂತತಿಯನ್ನೇ ಪಡೆಯುತ್ತಿರುವ ಹೆಣ್ಣುಮೇಕೆಯಂತಿರುವ ಪ್ರಕೃತಿಯನ್ನು ಒಂದು ಗಂಡುಮೇಕೆಯಂತಿರುವ ಚೇತನನು ಅನುಭವಿಸುತ್ತಾ ಬಿದ್ದಿರುವನು. ಮತ್ತೊಬ್ಬನಿಂದ ಅನುಭವಿಸಲ್ಪಟ್ಟದೆಂದು ಇದನ್ನು ಮತ್ತೊಂದು ಮೇಕೆಯು (ಪರಮಾತ್ಮನು) ಬಿಡುತ್ತಾನೆ ॥೧೩॥

ಶ್ಲೋ॥ ತ್ವಂ ಪಿತೃಣಾಮಪಿ ಪಿತಾ ದೇವಾನಾಮಪಿ ದೇವತಾ ।
ಪರತೋಽಪಿ ಪರಶ್ಚಾಸಿ ವಿಧಾತಾ ವೇಧಸಾ ಮಪಿ ॥೧೪॥

ಪದ—(೧) ತ್ವಂ (೨) ಪಿತೃಣಾಂ (೩) ಅಪಿ (೪) ಪಿತಾ (೫) ದೇವಾನಾಂ (೬) ಅಪಿ (೭) ದೇವತಾ (೮) ಪರತಃ (೯) ಅಪಿ (೧೦) ಪರಃ (೧೧) ಚ (೧೨) ಅಸಿ, (೧೩) ವಿಧಾತಾ (೧೪) ವೇಧಸಾಂ (೧೫) ಅಪಿ.

ಶಬ್ದ—(೧) ದ, ಪು, ಪ್ರ, ಏ (೨) ಬು, ಪು, ಷ, ಬ (೪, ೬, ೮ ೯, ೧೧, ೧೫) ಅವ್ಯ. (೪) ಬು, ಪು, ಪ್ರ, ಏ (೫) ಅ, ಪು, ಷ, ಬ (೭) ಆ, ಸ್ತ್ರೀ, ಪ್ರ, ಏ (೧೦) ಅ, ಪು, ಪ್ರ, ಏ (೧೨) ಕ್ರಿ (೧೪) ಸ, ಪು, ಪ, ಬ.

ಅನ್ವಯ—ತ್ವಂಪಿತೄಣಾಂ ಅಪಿ ಪಿತಾ, ದೇವಾನಾಂ ಅಪಿ ದೇವತಾ, ಪರತಃ, ಅಪಿಪರಃ, ವೇಧಸಾಂ ಅಪಿ ಚ ವಿಧಾತಾ, ಅಸಿ,

ಅರ್ಥ—ತ್ವಂ-ನೀನು, ಪಿತೄಣಾಮಪಿ-ಪಿತೃಗಣಕ್ಕೂ, ಪಿತಾ-ತಂದೆ, ದೇವನಾಂ-ಇಂದ್ರಾದಿದೇವತೆಗಳಿಗೆ, ಅಪಿ-ಕೂಡ, ದೇವತಾ-ದೇವನು, ಪರತೋಽಪಿ-ಎಲ್ಲಾ ಶ್ರೇಷ್ಠವಸ್ತುಗಳಿಗಿಂತಲೂ, ಪರಃ-ಶ್ರೇಷ್ಠನು ವೇಧಸಾಮಪಿಚ-ದಕ್ಷಾದಿಬ್ರಹ್ಮರುಗಳಿಗೂ ಸಹ, ವಿಧಾತಾ-ಉತ್ಪತ್ತಿಕಾರಣನು, ಅಸಿ-ಆಗಿರುತ್ತೀಯೆ.

ತಾತ್ಪರ್ಯ—ಎಲೈ ಭಗವಂತನೇ ! ಎಲ್ಲ ಜನರಿಂದಲೂ ತರ್ಪಣವನ್ನು ಪಡೆಯುತ್ತಿರುವ ಅಗ್ನಿಷ್ವಾತ್ತಾದಿ ಪಿತೃಗಣವುನಿನಗೋಸುಗ ತರ್ಪಣವನ್ನು ಮಾಡುತ್ತಾರಾಗಿ ಆ ಪಿತೃದೇವತೆಗಳಿಗೆ ನೀನು ಪಿತೃವಾಗಿದ್ದೀಯೆ. ಭೂಲೋಕದ ಜನರಿಂದ ಯಜ್ಞವನ್ನು ಮಾಡಿಸಿಕೊಂಡು ತೃಪ್ತಿಹೊಂದುವ ಇಂದ್ರಾದಿ ದೇವತೆಗಳು ನಿನ್ನ ತೃಪ್ತ್ಯರ್ಥವಾಗಿ ಯಜ್ಞಾದಿಗಳನ್ನು ಮಾಡುವವರಾದಕಾರಣ ಸಕಲ ದೇವತೆಗಳಿಗೂ ನೀನು ದೇವತೆಯಾಗಿರುವಿ. ಒಂದಕ್ಕೊಂದು ಶ್ರೇಷ್ಠವಾಗಿರುವ ಎಲ್ಲಾ ವಸ್ತುಗಳಿಗಿಂತಲೂ ಸರ್ವೋತ್ತಮನು ನೀನಾಗಿದ್ದೀಯೆ, ಪ್ರಪಂಚಸೃಷ್ಟಿಕರ್ತರಾದ ದಕ್ಷಾದಿನವಬ್ರಹ್ಮರನ್ನೂ ಉತ್ಪತ್ತಿಮಾಡುವನಾದುದರಿಂದ ಅವರಿಗೆ ನೀನು ಬ್ರಹ್ಮನಾಗಿದ್ದೀಯೆ.

ಆಕಾಂಕ್ಷೆ—ಅಸಿ, ಕಃ ? ತ್ವಂ (ಬು, ಪ್ರ) ಕಥಂಭೂತಃ ? ವಿಧಾತಾ, ಕೇಷಾಮಪಿಚ ? ವೇಧಸಾಮಪಿಚ, ಪುನಃಕಥಂಭೂತಃ, ಪರಃ. ಕುತೋಽಪಿ ? ಪರತೋಽಪಿ, ಪುನಃ ಕಥಂಭೂತಾ ? ದೇವತಾ, ಕೇಷಾಮಪಿ ? ದೇವಾನಾಮಪಿ, ಪುನಃ ಕಥಂಭೂತಃ, ಪಿತಾ. ಕೇಷಾಮಪಿ ? ಪಿತೄಣಾಮಪಿ

ಧಾತುರೂಪ—(೧೨) ಅಸ್ತಿ, ಸ್ತಃ, ಸಂತಿ
ಅಸಿ, ಸ್ಥಃ, ಸ್ಥ
ಅಸ್ಮಿ. ಸ್ವಃ, ಸ್ಮಃ

ಧಾತ್ವರ್ಥ—(ಅಸ-ಭುವಿ) ಇರುವಿಕೆ, ಎಂಬರ್ಥವುಳ್ಳ ಅದಾದಿ ಎರಡನೆಯ ಗಣದ ಪರಸ್ಮೈಪದಿ 'ಅಸ' ಎಂಬ ಧಾತುವು ವರ್ತಮಾನ ಕಾಲದ 'ಲಿಟ್' ಲಕಾರದ ಮಧ್ಯಮಪುರುಷೈಕವಚನದಲ್ಲಿದೆ.

ವಿಶೇಷ—(೮) ಪಂಚಮಿಗೆ ತಸಿಲ್, ಪ್ರತ್ಯಯವು ಬಂತು (೧೦) ಅಸ್ಮಾತ್ಪರಂನಾಪರಮಸ್ತಿಕಿಂಚಿತ್, ಎಂಬ ಶ್ರುತಿಯಿಂದಲೂ, ಮತ್ತು "ಇಂದ್ರಿಯೇಭ್ಯಃ ಪರಾಹ್ಯರ್ಥಾ ಅರ್ಥೇಭ್ಯಶ್ಚಪರಂಮನಃ । ಮನಸಶ್ಚ ಪರಾಬುದ್ಧಿರ್ಬುದ್ಧೇ ರಾತ್ಮಾಮಹಾನ್ಪರಃ ॥ ಮಹತಃ ಪರಮವ್ಯಕ್ತ ಮವ್ಯಕ್ತಾತ್ಪುರುಷಃಪರಃ । ಪುರುಷಾನ್ನಪರಂ ಕಿಂಚಿತ್ಸಾಕಾಷ್ಠಾ ಸಾ ಪರಾಗತಿಃ ॥" ಇಂದ್ರಿಯ, ವಿಷಯ, ಮನಸ್ಸು, ಬುದ್ಧಿ, ಆತ್ಮ, ಅವ್ಯಕ್ತ, ಇವುಗಳು ಉತ್ತರೋತ್ತರವಾಗಿ ಶ್ರೇಷ್ಠಗಳು ಇವೆಲ್ಲಕ್ಕಿಂತಲೂ, ಪುರುಷನು (ಪರಮಾತ್ಮನು) ಶ್ರೇಷ್ಠನು, ಅದಕ್ಕಿಂತಲೂ ಶ್ರೇಷ್ಠವಾದ ವಸ್ತುವಾವುದೊಂದೂ ಇಲ್ಲ ವೆಂಬ ಗೀತಾವಾಕ್ಯದಿಂದಲೂ ಪರಾತ್ಪರನೆಂದು ಹೇಳಬೇಕು. ಪರ-ಶ್ರೇಷ್ಠ, ಅನ್ಯ, ದೂರಗತ, ಶತ್ರು, ಭಗವಂತ, (ನಾನಾ) (೧೩) ವಿದಧಾತೀತಿವಿಧಾತಾ (ಕೃ, ವೃ) ಬ್ರಹ್ಮ, ಮನ್ಮಥ (ನಾನಾ) ॥೧೪॥

ಶ್ಲೋ॥ ತ್ವಮೇವ ಹವ್ಯಂ ಹೋತಾ ಚ ಭೋಜ್ಯಂ ಭೋಕ್ತಾ ಚ ಶಾಶ್ವತಃ । ವೇದ್ಯಂ ಚ ವೇದಿತಾ ಚಾಸಿ ಧ್ಯಾತಾಧ್ಯೇಯಂಚ ಯತ್ಪರಂ ॥೧೫॥

ಪದ—(೧) ತ್ವಂ (೨) ಏವ (೩) ಹವ್ಯಂ (೪) ಹೋತಾ (೫) ಚ (೬) ಭೋಜ್ಯಂ (೭) ಭೋಕ್ತಾ (೮) ಚ (೯) ಶಾತ್ವತಃ (೧೦) ವೇದ್ಯಂ (೧೧) ಚ, (೧೨) ವೇದಿತಾ (೧೩) ಚ (೧೪) ಅಸಿ (೧೫) ಧ್ಯಾತಾ (೧೬) ಧ್ಯೇಯಂ (೧೭) ಚ (೧೮) ಯತ್ (೧೯) ಪರಂ.

ಶಬ್ದ—(೧) ದ, ಪ್ರು. ಪ್ರ, ಏ (೨, ೫, ೮, ೧೧, ೧೩, ೧೭) ಅವ್ಯ (೩, ೬, ೧೦, ೧೬, ೧೯) ಅ, ನ, ಪ್ರ, ಏ (೪, ೭, ೧೨, ೧೫) ಋ,

ಪು, ಪ್ರ, ಏ (೯) ಅ, ಪು, ಪ್ರ, ಏ (೧೪) ಕ್ರಿ. (೧೮) ದ, ನ, ಪ್ರ ಏ.

ಅನ್ವಯಃ---ತ್ವಮೇವ ಹವ್ಯಂ ಹೋತಾಚ, ಭೋಜ್ಯಂ ಶಾಶ್ವತಃ ಭೋಕ್ತಾಚ, ವೇದ್ಯಂಚವೇದಿತಾಚ, ಧ್ಯಾತಾಯತ್ ಪರಂಧ್ಯೇಯಂತಚ್ಚ, ಅಸಿ,

ಅರ್ಥ---ತ್ವಮೇವ-ನೀನೇ, ಹವ್ಯಂ-ಆಜ್ಯಾದಿಹೋಮದ್ರವ್ಯವೂ, ಹೋತಾಚ-ಹೋಮಕರ್ತೃವೂ, ಭೋಜ್ಯಂ-ಅನ್ನವೂ, ಶಾಶ್ವತಃ-ನಾಶರಹಿತನಾದ, ಭೋಕ್ತಾ-ಭುಂಜಿಸುವವನು, ಚ-ಸಹ, ವೇದ್ಯಂ-ತಿಳಿಯಲ್ಪಡತಕ್ಕವನೂ, ವೇದಿತಾಚ - ತಿಳಿಯತಕ್ಕವನೂ, ಧ್ಯಾತಾ - ಧ್ಯಾನಮಾಡುವವನೂ, ಯತ್-ಯಾವುದು, ಪರಂ-ಶ್ರೇಷ್ಠವಾದ, ಧ್ಯೇಯಂ-ಧ್ಯಾನಿಸಲ್ಪಡತಕ್ಕದೋ, ( ತಚ್ಚ - ಅದೂಕೂಡ ) ಅಸಿ - ನೀನು ಆಗುತ್ತೀಯೆ.

ತಾತ್ಪರ್ಯ--ಸರ್ವಂಖಲ್ವಿದಂ ಬ್ರಹ್ಮ, ಓಂತತ್ಸರ್ವಂ,ನಾನ್ಯತ್ಕಿಂಚಿತ್, ಮೊದಲಾದ ಶ್ರುತಿವಚನಗಳಿಂದ ನಿನ್ನನ್ನುಳಿದ ಬೇರೆವಸ್ತುವೇ ಲೋಕದಲ್ಲಿಲ್ಲವಾದಕಾರಣ ಎಲೈ ಭಗವಂತನೇ ! ಆಜ್ಯಾದಿ ಹವಿಃಪದಾರ್ಥಗಳೂ ಅವುಗಳನ್ನು ಹೋಮಮಾಡುವವನೂ, ಎರಡೂ ನೀನೆ ! ಅನ್ನವೂನೀನೆ, ಭೋಜನಮಾಡುವವನೂ ನೀನೆ. ತಿಳಿಯಲ್ಪಡತಕ್ಕವನೂ ತಿಳಿಯುವವನೂ ನೀನೆ ! ಧ್ಯಾನಿಸುವವನೂ ನೀನೇ ! ಧ್ಯಾನಕ್ಕೆ ವಿಷಯವಾದ ಶ್ರೇಷ್ಠವಸ್ತುವೂ ನೀನೆ.

ಆಕಾಂಕ್ಷೆ---ಅಸಿ, ಕಃ ? ತ್ವಂ (ಅ, ಪು) ಕಥಂಭೂತಃ ? ಧ್ಯಾತಾ, ಕಿಂಚ ? ತಚ್ಚ, ಕಥಂಭೂತಂ ? ಧ್ಯೇಯಂ, ಕಥಂಭೂತಂಚ ? ಯತ್ಪರಂ, ಪುನಃಕಥಂಭೂತಶ್ಚ ? ವೇದಿತಾಚ. ಕಥಂಭೂತಂ ? ವೇದ್ಯಂ ಪುನಃಕಥಂಭೂತಸ್ತ್ವಂ ಭೋಕ್ತಾಂ, ಕಥಂಭೂತೋ ಭೋಕ್ತಾ ? ಶಾಶ್ವತಃ ಪುನಃ ಕಥಂಭೂತಂ? ಭೋಜ್ಯಂ, ಪುನಃ ಕಥಂಭೂತಸ್ತ್ವಂ? ಹೋತಾಚ, ಪುನಃಕಥಂಭೂತಂ ? ಹವ್ಯಂ.

ವಿಶೇಷ---(೩) ಹೂಯತೇ ಇತಿಹವ್ಯಂ (ಕೃ, ಪ್ರ) ಯತ್ ಪ್ರತ್ಯಯವು ಬಂತು (೪) ಜುಹೋತೀತಿ ಹೋತಾ (ಕೃ, ಪ್ರ) (೬) ಭೋಕ್ತುಂಯೋಗ್ಯಂ-ಭೋಜ್ಯಂ (ಕೃ, ಪ್ರ) ಯತ್ ಪ್ರತ್ಯಯವು ಬಂದಿದೆ.

ಇಲ್ಲಿ ಭುಜ ಎಂಬಧಾತುವು ಭಕ್ಷ್ಯಾರ್ಥದಲ್ಲಿರುವುದರಿಂದ ಭೋಜ್ಯಂ, ನಿಪಾತವಮಾಡಿರುವುದರಿಂದ ಕುತ್ವವು ಬಂದು ಭೋಗ್ಯಂ ಎಂದಾಗಲಿಲ್ಲ(೯) ಶಶ್ವತ್ ಸಿದ್ಧಃ-ಶಾಶ್ವತಃ (ತ, ವೃ) ಸರ್ವದಾ ಇರುವವನು [ಅವ, ಅ] ಕಾಲಾರ್ಥಕ ಶಬ್ದಗಳಿಗೆ ಠಞ್, (ಇಕ್) ಪ್ರತ್ಯಯುವು ಬರಬೇಕೆಂಬ ಸೂತ್ರಕ್ಕೆ ಅಪವಾದವಾಗಿ ಇಲ್ಲಿ,ಅಣ್,(ಅ) ಪ್ರತ್ಯಯುವು ಬಂತು. ಣ' ಕಾರವು ಲೋಪವಾಗುವ ಪ್ರತ್ಯಯುವಾದುದರಿಂದ ಶಬ್ದಾದಿಗೆ ದೀರ್ಘವುಬಂದು ಶಾಶ್ವತ ವೆಂದಾಯ್ತು. (೧೫) 'ಧ್ಯೈ' ಧಾತುವಿಗೆ ತ್ರ ಪ್ರತ್ಯಯುವು ಪರವಾಗಿದೆ. ಇದು ಶಿತ್ ಪ್ರತ್ಯಯುವಲ್ಲದುದರಿಂದ ಧಾತುವಿನ ಐಕಾರಕ್ಕೆ 'ಆ, ಕಾರಾದೇಶವು ಬಂದಿದೆ (ಕೃ, ವೃ) ಆತ್ಮಸಾಕ್ಷಾತ್ಕಾರಕ್ಕೆ ಕಾರಣವಾದ ನಂಬಿಕೆಯು ಬಲವಾದ ಪ್ರವಾಹ (ಪರಂಪರೆ) ಕ್ಕೆ ಧ್ಯಾನವೆಂದು ಹೆಸರು. ಇಲ್ಲಿ ಹವ್ಯ,ಹೋತೃ,ಮೊದಲಾದ ಭಿನ್ನ ವಸ್ತುಗಳಿಗೆ ಐಕ್ಯವನ್ನು ಹೇಳಿರುವುದರಿಂದ ಈಶ್ವರಭಿನ್ನವಸ್ತುವು ಲೋಕದಲ್ಲಿಲ್ಲವಾಗಿ "ಸರ್ವಂಖಲ್ವಿದಂ ಬ್ರಹ್ಮ, ಎಂಬ ಶ್ರುತಿಯು ಅರ್ಥವು ವ್ಯಕ್ತವಾಗುತ್ತದೆ ||೧೫||

ಶ್ಲೋ|| ಇತಿತೇಭ್ಯಃ ಸ್ತುತೀಃ ಶ್ರುತ್ವಾ ಯಥಾರ್ಥಾ ಹೃದಯಂಗಮಾಃ ।
ಪ್ರಸಾದಾಭಿಮುಖೋ ವೇಧಾಃ ಪ್ರತ್ಯುವಾಚ ದಿವೌಕಸಃ ||೧೬||

ಪದ—(೧) ಇತಿ (೨) ತೇಭ್ಯಃ (೩) ಸ್ತುತೀಃ (೪) ಶ್ರುತ್ವಾ (೫) ಯಥಾರ್ಥಾಃ (೬) ಹೃದಯಂಗಮಾಃ [೭] ಪ್ರಸಾದಾಭಿಮುಖಃ [೮] ವೇಧಾಃ (೯) ಪ್ರತ್ಯುವಾಚ (೧೦) ದಿವೌಕಸಃ

ಶಬ್ದ—(೧, ೪) ಅವ್ಯ. (೨) ದ, ಪು, ಪಂ,ಬ (೩) ಇ, ಸ್ತ್ರೀ-ದ್ವಿ, ಬ (೫, ೬) ಆ, ಸ್ತ್ರೀ, ದ್ವಿ, ಬ (೭) ಅ, ಪು, ಪ್ರ, ಏ (೮) ಸ, ಪು ಪ್ರ, ಏ (೯) ಕ್ರಿ. (೧೦) ಸ, ಪು, ದ್ವಿ, ಬ

ಅನ್ವಯ—ವೇಧಾಃ ಇತಿತೇಭ್ಯಃ ಯಥಾರ್ಥಾಃ ಹೃದಯಂಗಮಾಃ-ಸ್ತುತೀಃ ಶ್ರುತ್ವಾ, ಪ್ರಸಾದಿಭಿಮುಖಸ್ಸನ್ ದಿವೌಕಸಃ ಪ್ರತ್ಯುವಾಚ

ಅರ್ಥ—ವೇಧಾಃ-ಬ್ರಹ್ಮನು, ಇತಿ-ಪೂರ್ವೋಕ್ತವಾದ, ಯಥಾರ್ಥಾಃ-ಸತ್ಯವಾದ, ಹೃದಯಂಗಮಾಃ - ಮನೋಹರಗಳಾದ, ಸ್ತುತೀಃ, ಸ್ತೋತ್ರಗಳನ್ನು, ಶ್ರುತ್ವಾ-ಕೇಳಿ, ಪ್ರಸಾದ-ಅನುಗ್ರಹಕ್ಕೆ, ಅಭಿಮುಖ

ಸ್ಸನ್-ಸಿದ್ಧನಾಗಿ, ದಿವೌಕಸಃ-ದೇವತೆಗಳನ್ನು ಕುರಿತು, ಪ್ರತ್ಯುವಾಚಃ ಹೇಳಿದನು.

ತಾತ್ಪರ್ಯ---ಬ್ರಹ್ಮನು ಶ್ರುತಿಸ್ಮೃತಿ ಪ್ರಸಿದ್ಧವಾಗಿಯೂ, ಸತ್ಯವಾಗಿಯೂ, ಮನೋಹರವಾಗಿಯೂ ಇರುವ ದೇವತೆಗಳ ಸ್ತುತಿವಚನವನ್ನು ಕೇಳಿ, ಸಂತುಷ್ಟನಾಗಿ, ಅವರಲ್ಲಿ ಅನುಗ್ರಹಬುದ್ಧಿಯುಳ್ಳವನಾಗಿ ಅವರೊಡನೆ ಇಂತೆಂದನು.

ಆಕಾಂಕ್ಷೆ---ಪ್ರತ್ಯುವಾಚ, ಕಃ ? ವೇಧಾಃ, ಕಾನ್-ದಿವೌಕಸಃ (ಸ, ಪ್ರ) ಕಥಂಭೂತಸ್ಸನ್ ? ಪ್ರಸಾದಾಭಿಮುಖಸ್ಸನ್-ಕಿಂಕೃತ್ವಾ ? ಶ್ರುತ್ವಾ, ಕಾಃ ? ಸ್ತುತೀಃ, ಕಥಂಭೂತಾಃ ಸ್ತುತೀಃ ? ಹೃದಯಂಗಮಾಃ, ಪುನಃ ಕಥಂಭೂತಾಃಸ್ತುತೀಃ ? ಯಥಾರ್ಥಾಃ, ಕೇಭ್ಯಃ ? ತೇಭ್ಯಃ, ಕಥಂ ? ಇತಿ.

ವಿಗ್ರಹ---(೫) ಅರ್ಥಮನತಿಕ್ರಮ್ಯ ಯಥಾರ್ಥಂ (ಅವ್ಯ, ಭಾ ಯಥಾರ್ಥ ಮಾಸಾಂಸಂತೀತಿ ಯಥಾರ್ಥಾಃ (ತ. ವೃ) + ತಾಃ (೬) ಹೃದಯಂಗಚ್ಛಂತೀತಿ ಹೃದಯಂಗಮಾಃ (ಕೃ. ವೃ) + ತಾಃ, (೭) ಪ್ರಸಾದೇನ ಅಭಿಮುಖಃ-ಪ್ರಸಾದಾಭಿಮುಖಃ (ತೃ ತ) (೧೦) ದಿವಃ ಓಕಃಯೇಷಾಂತೇ-ದಿವೌಕಸಃ (ಪ, ಬ) + ತಾನ್.

ಧಾತುರೂಪ---(೯) ಪ್ರತ್ಯುವಾಚ, ಪ್ರತ್ಯೂಚತುಃ ಪ್ರತ್ಯೂಚಃು.
ಪ್ರತ್ಯವಕ್ಥ, ಪ್ರತ್ಯೂಚಥುಃ, ಪ್ರತ್ಯೂಚ
ಪ್ರತ್ಯುವಾ (ವ) ಚ ಪ್ರತ್ಯೂಚಿವ, ಪ್ರತ್ಯೂಚಿಮ

ಧಾತ್ವರ್ಥ—(ವಚ-ಪರಿಭಾಷಣೇ) ಹೇಳುವಿಕೆ, ಎಂಬರ್ಥವುಳ್ಳ ಅದಾದಿ ಎರಡನೆಯಗಣದ ಪರಸ್ಮೈಪದಿ, ವಚ, ಎಂಬಧಾತುವಿಗೆ ಪ್ರತಿ ಎಂಬುಪಸರ್ಗವು ಕೂಡಿ, ಉತ್ತರವನ್ನು ಹೇಳುವಿಕೆ ಎಂಬರ್ಥವುಳ್ಳದ್ದಾಗಿ, ಲಿಟ್ ಲಕಾರದ ಭೂತರೂಪದ ಪ್ರಥಮಪುರುಷೈಕವಚನದಲ್ಲಿದೆ

ವಿಶೇಷ—(೨) ಕ್ರಿಯೋಪಯೋಗವಾದ ಶಬ್ದಕ್ಕೆ ಅಪಾದಾನ ಸಂಜ್ಞೆಬಂದಿರುವುದರಿಂದ, ಪಂಚಮೀ ವಿಭಕ್ತಿ ಬಂತು (೪) ಷ್ಟುಞ್, ಧಾತುವಿಗೆ ಭಾವಾರ್ಥವಲ್ಲಿ ಸ್ತ್ರೀಲಿಂಗದಲ್ಲಿ ಕ್ತಿನ್, ಪ್ರತ್ಯಯವು ಬಂದಿದೆ. (೪) ಕ್ತ್ವಾ ಪ್ರತ್ಯಯಾಂತಾವ್ಯಯ (೭) ಗಮ್ ಧಾತುವಿಗೆ ವಿಭಕ್ತಿಪ್ರ

ತ್ಯಯವು ಸೇರಿರುವುದರಿಂದ ಖಚ್ ಪ್ರತ್ಯಯವೂ, ಅದರಿಂದ ಮುಮಾಗ ಮವೂ ಬಂದಿದೆ (೮) ವಿಷ್ಣು, ಬ್ರಹ್ಮ, (ನಾನಾ) (೧೦) ದಿವಃ ಸ್ವರ್ಗವೇ ಓಕಸಃ-ಸ್ಥಾನವಾಗಿ ಉಳ್ಳವರು (ಅವ, ಅರ್ಥ)

ಶ್ಲೋ॥ ಪುರಾಣಸ್ಯ ಕವೇಸ್ತಸ್ಯ ಚತುರ್ಮುಖಸಮೀರಿತಾ ।
ಪ್ರವೃತ್ತಿರಾಸೀಚ್ಛಬ್ದಾನಾಂ ಚರಿತಾರ್ಥಾ ಚತುಷ್ಟಯೀ ॥೧೭॥

ಪದ--(೧) ಪುರಾಣಸ್ಯ (೨) ಕವೇಃ (೩) ತಸ್ಯ (೪) ಚತುರ್ಮುಖಸಮೀರಿತಾ (೫) ಪ್ರವೃತ್ತಿಃ [೬] ಆಸೀತ್ (೭) ಶಬ್ದಾನಾಂ [೮] ಚರಿತಾರ್ಥಾ (೯) ಚತುಷ್ಟಯೀ.

ಶಬ್ದ---(೧) ಅ, ಪು. ಷ, ಏ (೨) ಇ, ಪು, ಷ, ಏ (೩) ದ, ಪು ಷ, ಏ [೪, ೮) ಆ, ಸ್ತ್ರೀ ಪ್ರ, ಏ (೫) ಇಸ್ತ್ರೀ, ಪ್ರ, ಏ (೬) ಕ್ರಿ, (೭) ಅ, ಪು, ಷ, ಬ, (೯) ಈ, ಸ್ತ್ರೀ, ಪ್ರ ಏ

ಅನ್ವಯ—ಚತುಷ್ಟಯೀ ಶಬ್ದಾನಾಂ ಪ್ರವೃತ್ತಿಃ, ಪುರಾಣಸ್ಯ ಕವೇಃ ತಸ್ಯಚತುರ್ಮುಖಸಮೀರಿತಾಸತೀ, ಚರಿತಾರ್ಥಾ ಆಸೀತ್.

ಅರ್ಥ—ಚತುಷ್ಟಯೀ-ನಾಲ್ಕುವಿಧವಾದ, ಶಬ್ದಾನಾಂ-ಶಬ್ದಗಳ, ಪ್ರವೃತ್ತಿಃ-ಉಚ್ಚಾರಣೆಯು, ಪುರಾಣಸ್ಯ-ಪ್ರಾಚೀನನಾದ, ಕವೇಃ-ಕವಿಯಾದ, ತಸ್ಯ-ಆ ಬ್ರಹ್ಮನ, ಚತುಃ-ನಾಲ್ಕಾದ, ಮುಖ-ಮುಖಗಳಿಂದ, ಸಮೀರಿತಾಸತೀ-ಹೇಳಲ್ಪಟ್ಟದ್ದಾಗಿ, ಚರಿತ-ಹೊಂದಲ್ಪಟ್ಟ, ಅರ್ಥಾ-ಅಭಿಪ್ರಾಯವುಳ್ಳದ್ದು, ಆಸೀತ್-ಆಯ್ತು.

ತಾತ್ಪರ್ಯ—ಬ್ರಹ್ಮನು ನಾಲ್ಕುಮುಖಗಳಿಂದಲೂ ಮಾತನಾಡಿದುದರಿಂದ ಶಬ್ದಗಳಿಗೆ ನಾಲ್ಕುವಿಧದ ವಾಗ್ವೃತ್ತಿಯುಂಟಾದ ಕಾರಣ ವೈಖರೀ, ಮಧ್ಯಮಾ, ಪಶ್ಯಂತೀ, ಅನಪಾಯಿನೀ ಎಂಬ ನಾಲ್ಕುಬಗೆಯ ಪ್ರವರ್ತನೆಯುಳ್ಳ ಶಬ್ದಗಳ ಉಚ್ಚಾರಣರೀತಿಯು ಸಾರ್ಥಕವಾಯ್ತೋ ಎನ್ನುವಹಾಗೆ ಇತ್ತು, ಅಂದರೆ ನಾಲ್ಕುಮುಖಗಳಿಂದಲೂ ಬ್ರಹ್ಮನು ಏಕಕಾಲದಲ್ಲಿ ಉತ್ತರವನ್ನು ಹೇಳಿದನೆಂದು ಭಾವವು.

ಆಕಾಂಕ್ಷೆ—ಆಸೀತ್, ಕಾ ? ಪ್ರವೃತ್ತಿಃ (ಅ, ಪ್ರ) ಕೇಷಾಂ ? ಶಬ್ದಾನಾಂ, ಕಥಂಭೂತಾ ? ಚರಿತಾರ್ಥಾ, ಕಥಂಭೂತಾಸತೀ ? ಚತುರ್ಮುಖಸಮೀರಿತಾಸತೀ, ಕಸ್ಯ ? ತಸ್ಯ, ಕಥಂಭೂತಸ್ಯ ? ಕವೇಃ,

ಕಥಂಭೂತಸ್ಯ ಜನೇಃ ? ಪುರಾಣಸ್ಯ, ಕಥಂಭೂತಾಪ್ರವೃತ್ತಿಃ? ಚತುಷ್ಟಯೀ

ವಿಗ್ರಹ---(೪) ಮುಖಾನಾಂ ಚತ್ವಾರಿ, ಚತುರ್ಮುಖಾನಿ (ಷ. ತ) ಚತುರ್ಮುಖೈಃ-ಸಮೀರಿತಾ-ಚತುರ್ಮುಖಸಮೀರಿತಾ (ತೃ, ತ) (೮) ಚರಿತಃ ಅರ್ಥಃಯಸ್ಯಾಃ ಸಾಚರಿತಾರ್ಥಾ (ಷ. ಬ. ವ್ರೀ)

ಧಾತುರೂಪ---(೬) ಆಸೀತ್, ಆಸ್ತಾಂ, ಆಸನ್
ಆಸೀಃ, ಆಸ್ತಂ, ಆಸ್ತ
ಆಸಂ, ಆಸ್ವ, ಆಸ್ಮ

ಧಾತ್ವರ್ಥ---(ಅಸ-ಭುವಿ) ಇರುವಿಕೆ, ಆಗುವಿಕೆ, ಎಂಬರ್ಥವುಳ್ಳ ಅದಾದಿ, ಎರಡನೆಯ ಗಣದ ಪರಸ್ಮೈಪದಿ ‹ಅಸ› ಎಂಬ ಧಾತುವು ‹ಲುಙ್› ಲಕಾರದ ಭೂತರೂಪದ ಪ್ರಥಮಪುರುಷೈಕವಚನದಲ್ಲಿದೆ

ವಿಶೇಷ---(೧) ಪುರಾತನಃ-ಪುರಾಣಃ (ಹಳಬನು) ಪೃಷೋದರಾದಿಗಣದಲ್ಲಿ ಸೇರಿಸುವುದರಿಂದ ತಕಾರಲೋಪಬಂದಿದೆ (೨) ಕವಿ-ಕಾವ್ಯಕರ್ತೃ, ಶುಕ್ರ, ನೀರಹಕ್ಕಿ, ವಾಲ್ಮೀಕಿ, ಕುಮರೆಯಲಗಾಮು, ವಿದ್ವಾಂಸ (ನಾನಾರ್ಥ)(೫) "ವೈಖರೀಶಬ್ದ ನಿಷ್ಪತ್ತಿ ರ್ಮಧ್ಯಮಾಶ್ರುತಿಗೋಚರಾ। ದ್ಯೋತಿತಾರ್ಥಾಚ ಪಶ್ಯಂತೀ ಸೂಕ್ಷ್ಮಾವಾಗನಪಾಯಿನೀ॥, ಶಬ್ದದ ಉತ್ಪತ್ತಿಯು ವೈಖರಿಯು. ಕಿವಿಗೆ ಬೀಳುವುದು ಮಧ್ಯಮವು, ಅರ್ಥವನ್ನು ಸೂಚಿಸುವುದು ಪಶ್ಯಂತಿಯು, ಸೂಕ್ಷ್ಮವಾಗಿರುವುದು ಅನಪಾಯಿನಿಯು ಹೀಗೆ ಶಬ್ದಪ್ರವೃತ್ತಿಯು ನಾಲ್ಕು ಬಗೆಯುಳ್ಳದ್ದು (೯) ಚತುಷ್ಟಯೀ— ನಾಲ್ಕು ಅವಯವಗಳುಳ್ಳುದು. ಚತುರ್ ಶಬ್ದದಮೇಲೆ ಅವಯವವೆಂಬರ್ಥದಲ್ಲಿ ತಯಪ್ ಪ್ರತ್ಯಯವೂ, ತಕಾರಕ್ಕೆಷ್ಟುತ್ವದಿಂದ ಟಕಾರಾದೇಶವೂ, ಸ್ತ್ರೀಲಿಂಗ ಜೀಪ್ ಪ್ರತ್ಯಯವೂ ಬಂದಿದೆ ॥೧೨॥

ಶ್ಲೋ॥ ಸ್ವಾಗತಂ ಸ್ವಾನಧೀಕಾರಾನ್ ಪ್ರಭಾವೈರವಲಂಬ್ಯವಃ । ॥
ಯುಗಪದ್ಯುಗಬಾಹುಭ್ಯಃ ಪ್ರಾಪ್ತೇಭ್ಯಃಪ್ರಾಜ್ಯ ವಿಕ್ರಮಾಃ (೪

ಪದ---(೧) ಸ್ವಾಗತಂ (೨) ಸ್ವಾನ್ (೩) ಅಧೀಕಾರಾನ್ ಪ್ರಭಾವೈಃ (೫) ಅವಲಂಬ್ಯ (೬) ನಃ (೭) ಯುಗಪತ್ (೮) ಯುಗಬಾಹುಭ್ಯಃ (೯) ಪ್ರಾಪ್ತೇಭ್ಯಃ (೧೦) ಪ್ರಾಜ್ಯವಿಕ್ರಮಾಃ

ಶಬ್ದ—(೧,೪,೩) ಅವ್ಯ (೨,೪) ಅ, ಪು ದ್ವಿ, ಬ[೬] ಗ, ಪು, ಚ, ಬ, [೮] ಉ, ಪು, ಚ, ಬ, (೯) ಅ, ಪು, ಚ, ಬ [೧೦] ಅ, ಪು, ಸ, ಬ.

ಅನ್ವಯ—ಪ್ರಾಜ್ಯವಿಕ್ರಮಾಃ? ಸ್ವಾನ್ ಅಧೀಕಾರಾನ್ ಪ್ರಭಾವೈಃ ಅವಲಂಬ್ಯ ಯುಗಪತ್ ಪ್ರಾಪ್ತೇಭ್ಯಃ ಯುಗಬಾಹುಭ್ಯಃ ವಃ, ಸ್ವಾಗತಂ?

ಅರ್ಥ— ಪ್ರಾಜ್ಯ-ಸಂಪೂರ್ಣವಾದ, ವಿಕ್ರಮಾಃ-ಪರಾಕ್ರಮವುಳ್ಳ ದೇವತೆಗಳಿರಾ ! ಸ್ವಾನ್-ಸ್ವಕೀಯಗಳಾದ, ಅಧೀಕಾರಾನ್-ಉದ್ಯೋಗ ಗಳನ್ನು, ಪ್ರಭಾವೈಃ-ಮಹಿಮೆಗಳಿಂದ, ಅವಲಂಬ್ಯ-ಆಶ್ರಯಿಸಿ, ಯುಗ ಪತ್-ಏಕಕಾಲದಲ್ಲಿ, ಪ್ರಾಪ್ತೇಭ್ಯಃ-ಇಲ್ಲಿಗೆ ಬಂದಿರುವ, ಯುಗ-ನೊಗ ದಂತೆ ದೀರ್ಘವಾದ, ಬಾಹುಭ್ಯಃ-ಭುಜಗಳುಳ್ಳ, ವಃ-ನಿಮಗೆ, ಸ್ವಾಗ ತಂ-ಸುಖಾಗಮನವೇ !

ತಾತ್ಪರ್ಯ ॥ ಎಲೈ ಮಹಾ ಪರಾಕ್ರಮಶಾಲಿಗಳಾದ ಇಂದ್ರಾದಿಗ ಳಿರಾ ! ನೊಗದೋಪಾದಿಯಲ್ಲಿರುವ ನಿಡುದೋಳುಗಳುಳ್ಳವರಾಗಿ ನಿಮ್ಮ ನಿಮ್ಮ ಅಧಿಕಾರಗಳಲ್ಲಿ ಸುಖದಿಂದಿದ್ದು ಈಗ ಇಲ್ಲಿಗೆ ಒಟ್ಟಾಗಿ ಬಂದಿರು ವ ನಿಮಗೆ ಸುಖಾಗಮನವೇ ? ಎಂದು ಬ್ರಹ್ಮನು ದೇವತೆಗಳ ಸ್ವಾಗ ತವನ್ನು ವಿಚಾರಿಸಿದನೆಂದು ಭಾವವು

ಆಕಾಂಕ್ಷೆ—ಸ್ವಾಗತಂ? ಕೇಭ್ಯಃ? ವಃ, ಕಥಂಭೂತೇಭ್ಯಃವಃ ? ಯುಗಬಾಹುಭ್ಯಃ, ಪುನಃಕಥಂಭೂತೇಭ್ಯಃವಃ ? ಪ್ರಾಪ್ತೇಭ್ಯಃ, ಕದಾ? ಯುಗಪತ್, ಕಿಂಕೃತ್ವಾ? ಅವಲಂಬ್ಯ, ಕಾನ್? ಅಧೀಕಾರಾನ್, ಕಥಂ ಭೂತಾನ್ ಅಧೀಕಾರಾನ್? ಸ್ವಾನ್, ಕೈಃ? ಪ್ರಭಾವೈಃ, ಕಥಂಭೂತಾಃ ? ಪ್ರಾಜ್ಯವಿಕ್ರಮಾಃ.

ವಿಗ್ರಹ—(೮) ಯುಗ ಇವ ಬಾಹೂಯೇಷಾಂ ತೇ, - ಯುಗ ಬಾಹವಃ (ಷ, ಬ, ವ್ರೀ) + ತೇಭ್ಯಃ, (೧೦) ಪ್ರಾಜ್ಯಃ ವಿಕ್ರಮಃ ಯೇಷಾಂ ತೇ-ಪ್ರಾಜ್ಯವಿಕ್ರಮಾಃ (ಷ, ಬ, ವ್ರೀ) + ತಸ್ಯ ಸಂಬುದ್ಧಿಃ.

ವಿಶೇಷ—(೩) ಉಪಸರ್ಗವಾದ 'ಅಧಿ' ಎಂಬುದಕ್ಕೆ 'ಘಞ್' ಪ್ರತ್ಯಯಾಂತವಾದ 'ಕಾರಃ' ಎಂಬ ಶಬ್ದವು ಪರವಾದುದರಿಂದ ಉಪಸ ರ್ಗದ ಕೊನೆಯ ಇಕಾರಕ್ಕೆ ವಿಕಲ್ಪವಾಗಿ ದೀರ್ಘಾದೇಶವು ಬಂದಿದೆ. (೬) 'ಯುಷ್ಮದ್' ಶಬ್ದಕ್ಕೆ ಚತುರ್ಥೀ ಬಹುವಚನದಲ್ಲಿ 'ವಸ್' ಎಂಬಾ ದೇಶವು ಬಂದಿದೆ. 'ಸ್' ಎಂಬುವುದು ಪದದ ಕೊನೆಯಲ್ಲಿರುವುದರಿಂದ 'ರ್' ಎಂಬಾದೇಶವೂ, ಅದಕ್ಕೆ 'ಃ' ವಿಸರ್ಗವು ಆದೇಶವಾಗಿದೆ. (೮)

ಉದ್ದವಾದ ತೋಳುಗಳು ಭಾಗ್ಯಪ್ರದಗಳೆಂದು ಪ್ರತೀತಿಯು ॥೧೮॥
ಶ್ಲೋ॥ ಕಿಮಿದಂ ದ್ಯುತಿ ಮಾತ್ಮೀಯಾಂ ನಬಿಭ್ರತಿಯಥಾಪುರಾ ।
ಹಿಮಕ್ಲಿಷ್ಟಪ್ರಕಾಶಾನಿ ಜ್ಯೋತೀಂಷೀವಮುಖಾನಿವಃ ॥ ೧೯ ॥

ಪದ—(೧) ಕಿಂ (೨) ಇದಂ (೩) ದ್ಯುತಿಂ (೪) ಆತ್ಮೀಯಾಂ (೫) ನ (೬) ಬಿಭ್ರತಿ (೭) ಯಥಾ (೮) ಪುರಾ (೯) ಹಿಮಕ್ಲಿಷ್ಟಪ್ರಕಾಶಾನಿ (೧೦) ಜ್ಯೋತೀಂಷಿ (೧೧) ಇವ (೧೨) ಮುಖಾನಿ (೧೩) ವಃ.

ಶಬ್ದ—(೧, ೨) ಮ, ನ, ಪ್ರ, ಏ (೩) ಇ, ಸ್ತ್ರೀ, ದ್ವಿ, ಏ (೪) ಆ, ಸ್ತ್ರೀ, ದ್ವಿ, ಏ (೫, ೭, ೮, ೧೧)ಅವ್ಯ (೬) ಕ್ರಿ, (೯, ೧೨) ಅ, ನ, ಪ್ರ, ಬ (೧೦) ಷ, ನ, ಪ್ರ, ಬ (೧೩) ದ, ಪು, ಷ, ಬ.

ಅನ್ವಯ—ವಃ ಮುಖಾನಿ ಆತ್ಮೀಯಾಂದ್ಯುತಿಂ ಯಥಾಪುರಾ, ಹಿಮಕ್ಲಿಷ್ಟಪ್ರಕಾಶಾನಿ ಜ್ಯೋತೀಂಷೀವ, ನ ಬಿಭ್ರತಿ, ಇದಂ ಕಿಂ ?

ಅರ್ಥ—ವಃ-ನಿಮ್ಮ, ಮುಖಾನಿ-ಮುಖಗಳು, ಆತ್ಮೀಯಾಂ-ತಮ್ಮ, ದ್ಯುತಿಂ-ಕಾಂತಿಯನ್ನು, ಯಥಾಪುರಾ-ಪೂರ್ವದಂತೆ, ಹಿಮ-ಮಂಜಿನಿಂದ, ಕ್ಲಿಷ್ಟ-ಮಲಿನವಾದ, ಪ್ರಕಾಶಾನಿ-ಕಾಂತಿಯುಳ್ಳ, ಜ್ಯೋತೀಂಷೀವ-ನಕ್ಷತ್ರಗಳೋಪಾದಿಯಲ್ಲಿ, ನಬಿಭ್ರತಿ-ಧರಿಸುತ್ತಿಲ್ಲ. ಇದಂ-ಈ ಸಮಾಚಾರವು, ಕಿಂ-ಏನು ?

ತಾತ್ಪರ್ಯ—ಮಂಜು ಮುಚ್ಚಿಕೊಳ್ಳುವುದರಿಂದ ಮಂಕಾಗುವ ನಕ್ಷತ್ರಗಳಂತೆ ನಿಮ್ಮ ಮುಖವು ಕಳೆಗುಂದಿಹೋಗಿ ಪೂರ್ವದಂತೆ ಕಾಂತಿಯುಕ್ತವಾಗಿಲ್ಲದಿರುವುದು. ಇದೇನು ಸಮಾಚಾರವು ?

ಆಕಾಂಕ್ಷೆ—ಕಿಂ, ಯತ್ ? ಇದಂ. ನಬಿಭ್ರತಿ, ಕಾನಿ ? ಮುಖಾನಿ, ಕಾಂ? ಕಾಂತಿಂ. (ಸು, ಪ್ರ) ಕೇಷಾಂ? ವಃ, ಕಥಂಭೂತಾಂದ್ಯುತಿಂ ? ಆತ್ಮೀಯಾಂ, ಕಥಂ ? ಯಥಾಪುರಾ, ಕಾನೀವ ? ಜ್ಯೋತೀಂಷೀವ, ಕಥಂ ಭೂತಾನಿ ಜ್ಯೋತೀಂಷಿ ? ಹಿಮಕ್ಲಿಷ್ಟಪ್ರಕಾಶಾನಿ.

ವಿಗ್ರಹ---(೪) ಆತ್ಮನಃ ಇಯಂ-ಆತ್ಮೀಯಾ (=, ವೃ) + ತಾಂ (೯) ಹಿಮೇನಕ್ಲಿಷ್ಟಾನಿ-ಹಿಮಕ್ಲಿಷ್ಟಾನಿ (ತೃ, ತ) ಹಿಮಕ್ಲಿಷ್ಟಾನಿಪ್ರಕಾಶಾನಿಯೇಷಾಂತಾನಿ-ಹಿಮಕ್ಲಿಷ್ಟಪ್ರಕಾಶಾನಿ (ಷ, ಬ, ವ್ರೀ).

ಧಾತುರೂಪ---(೬) ಬಿಭರ್ತಿ, ಬಿಭೃತಃ, ಬಿಭ್ರತಿ,

ಬಿಭರ್ಷೆ, ಬಿಭೃಥಃ, ಬಿಭೃಥ,
ಬಿಭರ್ಮಿ, ಬಿಭೃವಃ, ಬಿಭೃಮಃ,

ಧಾತ್ವರ್ಥ---(ಡುಭೃಞ್-ಧಾರಣಪೋಷಣಯೋಃ) ಧರಿಸುವಿಕೆ, ರಕ್ಷಿಸುವಿಕೆ, ಎಂಬರ್ಥವುಳ್ಳ 'ಜುಹೋತ್ಯಾದಿ' ಮೂರನೆಯ ಗಣದ ಉಭಯಪದಿ ಸಕರ್ಮಕ 'ಡುಭೃಞ್' ಎಂಬ ಧಾತುವು ಪರಸ್ಮೈಪದದ 'ಲಟ್' ಲಕಾರದ ವರ್ತಮಾನಕಾಲದ ಪ್ರಥಮಪುರುಷ ಬಹುವಚನ

ವಿಶೇಷ—(೪) 'ಝ' ಪ್ರತ್ಯಯವು (ಈಯು) ಬಂದಿದೆ. (೧೧) ಜ್ಯೋತಿಃ-ಕಾಂತಿ, ನಕ್ಷತ್ರ, ಅಗ್ನಿ (ನಾನಾ) (೧) ಕಿಮಿವ (ಪಾ) (೯) ಪ್ರಕಾಶಾನಿ-ಪ್ರಭಾವಾನಿ (ಪಾ) ಈ ಶ್ಲೋಕದಲ್ಲಿ 'ಮುಖಗಳು' ಮಲಿನವಾದ ನಕ್ಷತ್ರಗಳಂತೆ ಪ್ರಕಾಶವಿಲ್ಲದಿರುವುವು ? ಎಂಬ ವಾಕ್ಯಾರ್ಥದಿಂದ ಉಪಮಾಲಂಕಾರವು ॥ ೧೯ ॥

ಶ್ಲೋ॥ ಪ್ರಶಮಾ ದರ್ಚಿಷಾ ಮೇತದನುದ್ಗೀರ್ಣ ಸುರಾಯುಧಂ ।
ವೃತ್ರಸ್ಯ ಹಂತುಃ ಕುಲಿಶಂ ಕುಂಠಿತಾಶ್ರೀವ ಲಕ್ಷ್ಯತೇ ॥೨೦॥

ಪದ---(೧) ಪ್ರಶಮಾತ್ (೨) ಅರ್ಚಿಷಾಂ (೩) ಏತತ್ (೪) ಅನುದ್ಗೀರ್ಣಸುರಾಯುಧಂ (೫) ವೃತ್ರಸ್ಯ (೬) ಹಂತುಃ (೭) ಕುಲಿಶಂ (೮) ಕುಂಠಿತಾಶ್ರಿ (೯) ಇವ (೧೦)ಲಕ್ಷ್ಯತೇ.

ಶಬ್ದ---(೧) ಅ, ಪು, ಪಂ, ಏ (೨) ಷ, ನ, ಷ, ಬ (೩) ದ, ನ, ಪ್ರ, ಏ (೪, ೭) ಅ, ನ, ಪ್ರ, ಏ (೫) ಅ, ಪು, ಷ, ಏ (೬) ಋ, ಪು, ಷ, ಏ (೮) ಇ, ನ, ಪ್ರ, ಏ (೯) ಅವ್ಯ (೧೦) ಕ್ರಿ.

ಅನ್ವಯ---ಅರ್ಚಿಷಾಂ ಪ್ರಶಮಾತ್ ಅನುದ್ಗೀರ್ಣಸುರಾಯುಧಂ ವೃತ್ರಸ್ಯಹಂತುಃ ಕುಲಿಶಂ, ಕುಂಠಿತಾಶ್ರೀವಲಕ್ಷ್ಯತೇ.

ಅರ್ಥ---ಅರ್ಚಿಷಾಂ-ಕಾಂತಿಗಳ, ಪ್ರಶಮಾತ್-ತಗ್ಗುವಿಕೆಯಿಂದ ಅನುದ್ಗೀರ್ಣ-ಕಾರಲ್ಪಡದ, ಸುರಾಯುಧಂ-ಇಂದ್ರನ ಮುಕ್ಕುಳ್ಳ, ವೃತ್ರಸ್ಯ-ವೃತ್ರಾಸುರನನ್ನು, ಹಂತುಃ-ಕೊಂದ (ಇಂದ್ರನ) ಕುಲಿಶಂ-ವಜ್ರಾಯುಧವು, ಕುಂಠಿತ-ಮುರಿದುಹೋದ, ಅಶ್ರೀಃ-ತುದಿಯುಳ್ಳದ್ದೋ ಎನ್ನುವ ಹಾಗೆ, ಲಕ್ಷ್ಯತೇ-ಕಾಣುತ್ತದೆ.

ತಾತ್ಪರ್ಯ:—ಕಳೆಗುಂದಿರುವ ಕಾರಣ ತನ್ನ ಕಾಂತಿಯಿಂದ ಕಾ

ಮನ ಬಿಲ್ಲಿನ ಬಣ್ಣಗಳನ್ನುಗುಳದಂತೆ ಮಂಕಾಗಿರುವ ಈ ಇಂದ್ರನ ವಜ್ರಾಯುಧವನ್ನು ನೋಡಿದರೆ ಮೊನೆಯು ಮುರಿದುಹೋಗಿದೆಯೋ ಎಂಬಾತೆ ಕಾಣುವುದು.

ಆಕಾಂಕ್ಷೆ—.ಲಕ್ಷ್ಯತೇ, ಕಿಂ ? ಕುಲಿಶಂ (ಅ.ಪ್ರ) ಕಥಂಭೂತ ಮಿವ, ಕುಂಠಿತಾಶ್ರಿವ, ಕಸ್ಯ ? ಹಂತುಃ, ಕಸ್ಯ ? ವೃತ್ರಸ್ಯ, ಕಥಂ ಭೂತಂ ಕುಲಿಶಂ, ಅನುದ್ಗೀರ್ಣ ಸುರಾಯುಧಂ, ಪುನಃ ಕಥಂಭೂತಂ ಕುಲಿಶಂ ? ಏತತ್, ಕಸ್ಮಾತ್ ? ಪ್ರಶಮಾತ್, ಕೇಷಾಂ? ಅರ್ಚಿಷಾಂ,

ವಿಗ್ರಹ—(೪) ಸುರಾಣಾಂ ಆಯುಧಂ ಸುರಾಯುಧಂ (ಷ, ತ) ನಉದ್ಗೀರ್ಣಂ ಅನುದ್ಗೀರ್ಣಂ (ನಞ್,ತ) ಅನುದ್ಗೀರ್ಣಂ ಸುರಾಯುಧಂ ಯಸ್ಮಿಂಸ್ತತ್ ಅನುದ್ಗೀರ್ಣ ಸುರಾಯುಧಂ (ಸ. ಬ. ವ್ರೀ) (೮) ಕುಂಠಿತಾಃ ಅಶ್ರಯಃ ಯಸ್ಯತತ್ ಕುಂಠಿತಾಶ್ರಿ. (ಷ, ಬ, ವ್ರೀ)

ಧಾತುರೂಪ:—(೧೧) ಲಕ್ಷ್ಯತೇ, ಲಕ್ಷ್ಯೇತೇ, ಲಕ್ಷ್ಯಂತೇ
ಲಕ್ಷ್ಯಸೇ, ಲಕ್ಷ್ಯೇಥೇ, ಲಕ್ಷ್ಯಧ್ವೇ
ಲಕ್ಷ್ಯೇ, ಲಕ್ಷ್ಯಾವಹೇ, ಲಕ್ಷ್ಯಾಮಹೇ,

ಧಾತ್ವರ್ಥ—(ಲಕ್ಷದರ್ಶನಾಂಕನಯೋಃ) ನೋಡುವಿಕೆ, ಗುರುತುಮಾಡುವಿಕೆ, ಎಂಬರ್ಥವುಳ್ಳ ದಿವಾದಿ, ನಾಲ್ಕನೆಯಗಣದ ಆತ್ಮನೇಪದಿ ಲಕ್ಷ. ಎಂಬ ಧಾತುವು 'ಲಟ್', ಲಕಾರದ ವರ್ತಮಾನ ಕಾಲ, ಪ್ರ, ಏ.

ವಿಶೇಷ—(೨) ಅರ್ಚಿಃ-ಜೆಂಕಿಯುರಿ, ತೇಜಸ್ಸು, (ನಾನಾ), (೪) 'ಗೃ' ಎಂಬ ಧಾತುವಿಗೆ 'ಉತ್', ಎಂಬ ಉಪಸರ್ಗವೂ, ಕರ್ಮಾರ್ಥದಲ್ಲಿ 'ಕ್ತ', (ತ) ಪ್ರತ್ಯಯವೂ ಬಂದು. ಪ್ರತ್ಯಯದ ತಕಾರಕ್ಕೆ ನಕಾರಾದೇಶವೂ, ಅದಕ್ಕೆ ಪುನಃ ಣಕಾರಾದೇಶವೂ ಬಂದಿದೆ. ಈ ಶ್ಲೋಕದಲ್ಲಿ ವಜ್ರಾಯುಧವು ಪ್ರಕಾಶಿಸದೆ ಮಲಿನವಾಗಿರುವುದಕ್ಕೆ ಮೊನೆಯು ಮುರಿದಿದೆಯೋ ಎಂಬುತ್ಪ್ರೇಕ್ಷೆಯನ್ನು ಹೇಳಿರುವುದರಿಂದ ಉತ್ಪ್ರೇಕ್ಷಾಲಂಕಾರವು ॥೨೦॥

ಶ್ಲೋ॥ ಕಿಂಚಾಯ ಮರಿದುರ್ವಾರಃ ಪಾಣೌ ಪಾಶಃ ಪ್ರಚೇತಸಃ ।
ಮಂತ್ರೇಣಾಹತವೀರ್ಯಸ್ಯ ಫಣಿನೋ ದೈನ್ಯಮಾಶ್ರಿತಃ ॥೨೧॥

ಪದ—(೧) ಕಿಂ (೨) ಚ (೩) ಅಯಂ (೪) ಅರಿದುರ್ವಾರಃ (೫)

ಪಾಣೌ (೬) ಪಾಶಃ (೭) ಪ್ರಚೇತಸಃ (೮) ಮಂತ್ರೇಣ (೯) ಹತವೀರ್ಯಸ್ಯ (೧೦) ಫಣಿನಃ (೧೧) ದೈನ್ಯಂ (೧೨) ಆಶ್ರಿತಃ.

ಶಬ್ದ—(೧,೨) ಅವ್ಯ (೩) ಮ. ಪು, ಪ್ರ, ಏ (೪,೬,೧೨) ಅ.ಪು. ಪ್ರ. ಏ (೫) ಇ. ಪು. ಸ. ಏ (೭) ಸ, ಪು. ಷ. ಏ (೮) ಅ. ಪು. ತೃ. ಏ (೯) ಅ. ಪು. ಷ. ಏ (೧೦) ನ. ಪು. ಷ. ಏ (೧೧) ಆ. ನ. ದ್ವಿ. ಏ

ಅನ್ವಯ—ಕಿಂಚ ಅಯಂ ಅರಿದುರ್ವಾರಃ ಪ್ರಚೇತಸಃ ಪಾಶಃ,ಪಾಣೌ ಮಂತ್ರೇಣ ಹತವೀರ್ಯಸ್ಯ ಫಣಿನಃ ದೈನ್ಯಂ ಆಶ್ರಿತಃ,

ಅರ್ಥ—ಕಿಂಚ-ಮತ್ತೂ, ಅಯಂ-ಈ, ಅರಿ-ಶತ್ರುಗಳಿಗೆ, ದುರ್ವಾರಃ-ತಡೆಯಬಾರದ, ಪ್ರಚೇತಸಃ-ವರುಣನ, ಪಾಶಃ-ಪಾಶಾಯುಧವು, ಪಾಣೌ-ಕೈಯಲ್ಲಿ, ಮಂತ್ರೇಣ-ಗಾರುಡಮಂತ್ರದಿಂದ, ಹತ-ನಾಶವಾದ, ವೀರ್ಯಸ್ಯ-ಶೌರ್ಯವುಳ್ಳ, ಫಣಿನಃ-ಸರ್ಪದ,ದೈನ್ಯಂ-ದೀನಭಾವವನ್ನು, ಆಶ್ರಿತಃ-ಹೊಂದಿದೆ.

ತಾತ್ಪರ್ಯ—ಅಗೂ ಅಲ್ಲದೆ ಶತ್ರುಭಯಂಕರವಾದ ಈ ಪಾಶಾಯುಧವೂ ಸಹ, ವರುಣನ ಕೈಯಲ್ಲಿ, ಗಾರುಡಮಂತ್ರ ಶಕ್ತಿಯಿಂದ ಕಟ್ಟಿದ ಪರಾಕ್ರಮವುಳ್ಳ ಹಾವಿನ ದೀನತೆಯನ್ನು ಪಡೆದು ದೈನ್ಯದಿಂದಿರುವುದು.

ಆಕಾಂಕ್ಷೆ—ಆಶ್ರಿತಃ, ಕಃ ? ಪಾಶಃ, ಕಿಂ ? ದೈನ್ಯಂ, ಕಸ್ಯ ? ಫಣಿನಃ, ಕಥಂಭೂತಸ್ಯ ಫಣಿನಃ ? ಹತವೀರ್ಯಸ್ಯ, ಕೇನ-ಮಂತ್ರೇಣ, ಕಸ್ಮಿನ್ ? ಪಾಣೌ, ಕಸ್ಯ-ಪ್ರಚೇತಸಃ, ಕಥಂಭೂತಃ ಪಾಶಃ ? ಅರಿದುರ್ವಾರಃ, ಪುನಃ ಕಥಂಭೂತಃ ಪಾಶಃ ? ಅಯಂ, ಕಿಂ ? ಕಿಂಚ.

ವಿಗ್ರಹ—(೪) ದುಃಖೇನ ವಾರಯಿತುಂ ಯೋಗ್ಯಃ - ದುರ್ವಾರಃ (ಪ್ರಾ, ಸ) ಅರೀಣಾಂ ದುರ್ವಾರಃ-ಅರಿದುರ್ವಾರಃ (ಷ.ತ) (೯) ಹತಂ ವೀರ್ಯಂ ಯಸ್ಯಸಃ ಹತವೀರ್ಯಃ (ಷ, ಬ, ವ್ರೀ) + ತಸ್ಯ,

ವಿಶೇಷ—(೬) ಹಸ್ತ, ಸಮೀಹ, ಸಿಂದೆ, ಒಡವೆ, (ನಾನಾ) (೭) ಪ್ರಕೃಷ್ಟಂಚೇತಃ ಯಸ್ಯಸಃ-ಒಳ್ಳೆಮನಸ್ಸುಳ್ಳವನು (ಅವಯ) (೯) ವೀರ್ಯ-ರೇತಸ್ಸು, ಪ್ರಭಾವ, ತೇಜಸ್ಸು, ಪರಾಕ್ರಮ, (೧೦) ಫಣಾ ಅಸ್ಯಾಸ್ತೀತಿ-ಫಣೀ. ಹೆಡೆಯುಳ್ಳದು (ಅಮ) (೧೧) ಭಾವಾರ್ಥದಲ್ಲಿ ಯತ್, ಪ್ರತ್ಯಯವು ಬಂತು. (೧೨) 'ಆ, ಎಂಬುಪಸರ್ಗದೊಡನೆ 'ಶ್ರಿ, ಎಂಬ ಧಾ

ತುವಿಗೆ 'ಕ್ತ' ಪ್ರತ್ಯಯವು ಬಂದಿದೆ. ಈ ಶ್ಲೋಕದಲ್ಲಿ 'ಸರ್ಪದ ದೈನ್ಯವನ್ನು ಪಾಶವು ಹೊಂದಿತು' ಎಂಬ ವಾಕ್ಯಾರ್ಥದಲ್ಲಿ. ಸರ್ಪದ ದೈನ್ಯವು ಪಾಶದಲ್ಲಿ ಬರುವುದು ಅಸಂಭವವಾದುದರಿಂದ ತತ್ಸದೃಶ ದೈನ್ಯವುಂಟಾಯ್ತೆಂದು ಕಲ್ಪನೆ ಮಾಡುವುದರಿಂದ ಅಸಂಭವ ವದ್ವಸ್ತು ಸಂಬಂಧರೂಪವಾದ ನಿದರ್ಶನಾಲಂಕಾರವು ॥೨೮॥

ಶ್ಲೋ॥ ಕುಬೇರಸ್ಯ ಮನಶ್ಶಲ್ಯಂ ಶಂಸತೀವ ಪರಾಭವಂ ।
ಅಪವಿದ್ಧಗದೋ ಬಾಹು ರ್ಭಗ್ನಶಾಖ ಇವದ್ರುಮಃ ॥೨೯॥

ಪದ—(೧) ಕುಬೇರಸ್ಯ (೨) ಮನಶ್ಶಲ್ಯಂ (೩) ಶಸಂತಿ (೪) ಇವ (೫) ಪರಾಭವಂ (೬) ಅಪವಿದ್ಧಗದಃ (೭) ಬಾಹುಃ (೮) ಭಗ್ನಶಾಖಃ (೯) ಇವ (೧೦) ದ್ರುಮಃ.

ಶಬ್ದ—(೧) ಅ, ಪು, ಷ, ಏ (೨, ೫) ಅ, ಪು, ದ್ವಿ, ಏ (೩) ಕ್ರಿ (೪,೯) ಅವ್ಯ, (೬,೮,೧೦) ಅ, ಪು, ಪ್ರ ಏ. (೭) ಉ, ಪು. ಪ್ರ. ಏ

ಅನ್ವಯ—ಅಪವಿದ್ಧಗದಃ ಕುಬೇರಸ್ಯ ಬಾಹುಃ ಭಗ್ನಶಾಖಃ ದ್ರುಮ ಇವ, ಮನಶ್ಶಲ್ಯಂ ಪರಾಭವಂ ಶಂಸತೀವ,

ಅರ್ಥ—ಅಪವಿದ್ಧ-ಬಿಡಲ್ಪಟ್ಟ, ಗದಃ-ಗದೆಯುಳ್ಳ, ಕುಬೇರಸ್ಯ-ಕುಬೇರನ, ಬಾಹುಃ-ಭುಜವು, ಭಗ್ನ-ಮುರಿದುಬಿಟ್ಟ, ಶಾಖಃ-ಕೊಂಬೆಯುಳ್ಳ, ದ್ರುಮ ಇವ-ವೃಕ್ಷದೋಪಾದಿಯಲ್ಲಿ, ಮನಃ-ಮನಸ್ಸಿಗೆ, ಶಲ್ಯಂ-ವ್ಯಥೆಯನ್ನುಂಟುಮಾಡುವ, ಪರಾಭವಂ - ಅಪಜಯವನ್ನು, ಶಂಸತೀವ-ಹೇಳುತ್ತಿದೆಯೋ ಎನ್ನುವ ಹಾಗಿದೆ.

ತಾತ್ಪರ್ಯ—ಕೊಂಬೆಗಳಿಲ್ಲದ ಮರವು ಅಲಂಕಾರರಹಿತವಾಗಿರುವಂತೆಗದೆಯನ್ನು ತನ್ನ ಭುಜದಲ್ಲಿ ಧರಿಸದಿರುವುದರಿಂದ ಶೋಭಿಸದಿರುವ ಕುಬೇರನನ್ನು ನೋಡಿದರೆ ಅವನು ಅತಿದುಸ್ಸಹವಾದ ಅಪಜಯವನ್ನು ಶತ್ರುಗಳಿಂದ ಪಡೆದಿರುವ ಅಭಿಪ್ರಾಯವನ್ನು ಸೂಚಿಸುವಂತಿದೆ

ಆಕಾಂಕ್ಷೆ—ಶಂಸತೀವ, ಕಃ ? ಬಾಹುಃ, ಕಂ ? ಪರಾಭವಂ (ಸ,ಪ್ರ) ಕಥಂಭೂತಂ ಪರಾಭವಂ ? ಮನಶ್ಶಲ್ಯಂ, ಕ ಇವ ? ದ್ರುಮ ಇವ, ಕಥಂಭೂತಃ ದ್ರುಮಃ ? ಭಗ್ನಶಾಖಃ, ಕಸ್ಯ ? ಕುಬೇರಸ್ಯ, ಕಥಂ ಭೂತಃ ಬಾಹುಃ ? ಅಪವಿದ್ಧಗದಃ,

ವಿಗ್ರಹ—(೨) ಮನಸಃ ಶಲ್ಯಾಃ-ಮನಶ್ಶಲ್ಯಾಃ (ಷ.ತ) + ತಾ, (೬) ಅಪವಿದ್ಧಾಗದಾಯೇನಸಃ-ಅಪವಿದ್ಧಗದಃ (ತೃ.ಬ.ವ್ರೀ)(೮) ಭಗ್ನಾಶಾಖಾಯಸ್ಯಸಃ-ಭಗ್ನಶಾಖಃ (ಷ.ಬ.ವ್ರೀ)

ಧಾತುರೂಪ—(೪) ಶಂಸತಿ, ಶಂಸತಃ, ಶಂಸಂತಿ
ಶಂಸಸಿ, ಶಂಸಥಃ, ಶಂಸಥ,
ಶಂಸಾಮಿ ಶಂಸಾವಃ, ಶಂಸಾಮಃ.

ಧಾತ್ವರ್ಥ—(ಶಂಸು-ಸ್ತುತೌ) ಸ್ತುತಿಸುವಿಕೆಎಂಬರ್ಥವುಳ್ಳ ಭ್ವಾದಿ, ಒಂದನೆಯಗಣದ, ಪರಸ್ಮೈಪದ ಶಂಸು ಎಂಬ ಧಾತುವಿಗೆ ಹೇಳುವಿಕೆ, ಎಂಬರ್ಥದಲ್ಲಿ, 'ಲಟ್', ಲಕಾರದ, ವರ್ತಮಾನ ಕಾಲದ ಪ್ರ, ಏ.

ವಿಶೇಷ—(೨) ಶಲ್ಯಾಃ-ಪಾಪ,ಮುಳ್ಳುಗೋಲು,ತೋಮರಾಯುಧ, ಮುಳ್ಳುಹಂದಿ, ಮಂಗಾರೆಗಿಡ,ಕರ್ಣನಸಾರಥಿ,(೪) ಬಾಹುವು (ನಾ.ನಾ) ಹೇಳುವುದು ಅಸಂಭವವಾದುದರಿಂದ ಲಕ್ಷಣಾರ್ಥದಿಂದ ಅನುಮಾನವನ್ನು ಹುಟ್ಟಿಸುತ್ತಿತ್ತೆಂದು ಅರ್ಥವನ್ನು ಹೇಳಬೇಕು. (೮) ಶಾಖಾಶಬ್ದವು ಸ್ತ್ರೀಲಿಂಗವಾದರೂ ಬಹುವ್ರೀಹಿಸಮಾಸವಲ್ಲಿ ಪುಲ್ಲಿಂಗವಾಗಿ ಬಾಹುಶಬ್ದಕ್ಕೆ ವಿಶೇಷಣವಾಗಿದೆ. ಶಾಖಾ-ಕೊಂಬೆ, ಭುಜ, ಕಾಲು, ಪಕ್ಷಾಂತರ, ವೇದಭೇದ ಈ ಶ್ಲೋಕದಲ್ಲಿ ಗದೆಯನ್ನು ಧರಿಸದ ಬಾಹುವು ಕೊಂಬೆಮುರಿದು ಬಿದ್ದ ಮರದಹಾಗಿತ್ತು, ಎಂಬ ವಾಕ್ಯದಲ್ಲಿ ಉಪಮಾಲಂಕಾರವು,ಮತ್ತು- 'ಅಲಂಕಾರ ರಹಿತವಾಗಿರುವ ಗುರುತಿನಿಂದ ಪರಾಜಯವನ್ನು ಊಹಿಸಬಹುದಾಗಿವೆ' ಎಂಬ ವಾಕ್ಯಾರ್ಥದಿಂದ ಅನುಮಿತಲಂಕಾರವೂ ತೋರುವುದು ॥೨೨॥

ಶ್ಲೋ॥ ಯಮೋಽಪಿ ವಿಲಿಖನ್ಭೂಮಿಂ ದಂಡೇನಾಸ್ತಮಿತತ್ವಿಷಾ ।
ಕುರುತೇಽಸ್ಮಿನ್ನಮೋಘೇಽಪಿ ನಿರ್ವಾಣಾಲಾತಲಾಘವಂ ॥ ೨೩ ॥

ಪದ—(೧) ಯಮಃ (೨) ಅಪಿ (೩)ವಿಲಿಖನ್ (೪) ಭೂಮಿಂ (೫) ದಂಡೇನ (೬) ಅಸ್ತಮಿತತ್ವಿಷಾ (೭) ಕುರುತೇ (೮)ಅಸ್ಮಿನ್(೯)ಅಮೋಘೇ (೧೦) ಅಪಿ(೧೧) ನಿರ್ವಾಣಾಲಾತಲಾಘವಂ.

ಶಬ್ದ—(೧)ಅ. ಪು. ಪ್ರ. ಏ (೨, ೧೦) ಅವ್ಯ (೩)ತ, ಪು. ಪ್ರ. ಏ (೪) ಇ, ಸ್ತ್ರೀ, ದ್ವಿ, ಏ (೫) ಅ, ಪು, ತೃ, ಏ (೬) ಷ, ಪು, ತೃ, ಏ

(೬) ಕ್ರಿ. (೪) ದ, ಪ್ರ, ಸ, ಏ [೯] ಅ, ಪು, ಸ, ಏ [೧೧] ಅ,ನ,ದ್ವಿ,ಏ.

ಅನ್ವಯ:—ಯಮೋಽಪಿ, ಅಸ್ತಮಿತ ತ್ವಿಷಾ ದಂಡೇನ ಭೂಮಿಂ ವಿಲಿಖನ್, ಅನೋಕಹೇ ಅಸ್ಮಿನ್ನಪಿ, ನಿರ್ವಾಣಾಲಾತಲಾಘವಂ ಕುರುತೇ

ಅರ್ಥ—ಯಮೋಽಪಿ-ಯಮನಾದರೋ, ಅಸ್ತಮಿತ- ನಾಶವಾದ) ತ್ವಿಷಾ-ಕಾಂತಿಯುಳ್ಳ, ದಂಡೇನ-ತನ್ನ ದಂಡದಿಂದ, ಭೂಮಿಂ-ನೆಲವನ್ನು ವಿಲಿಖನ್-ಗೀಚುತ್ತಾ, ಅನೋಕಹೇ-ಶ್ರೇಷ್ಠವಾದ, ಅಸ್ಮಿನ್ನಪಿ-ದಂಡದಲ್ಲಿ, ಯೂ, ನಿರ್ವಾಣ-ಆರಿಹೋದ, ಅಲಾತ-ಕೊಳ್ಳಿಯು, ಲಾಘವಂ-ಅಲ್ಪತ್ವ ವನ್ನು, ಕುರುತೇ-ಮಾಡುತ್ತಾನೆ.

ತಾ॥ ಯಮನೂ ಕೂಡ ಕಳೆಗುಂದಿ ಮಲಿನವಾದ ತನ್ನ ದಂಡದಿಂದ ನೆಲವನ್ನು ಕೆರೆಯುತ್ತಾ, ಅಂತಹ ಅನೋಕಹವಾದ ದಂಡವನ್ನು ಬೆಂಕಿ ಆರಿದ ಕೊಳ್ಳಿಗಿಂತ ಕಡೆಯಾದ ನೀಚಾವಸ್ಥೆಯನ್ನು ಉಂಟುಮಾಡು ತ್ತಿರುವನು.

ಆಕಾಂಕ್ಷೆ—ಕುರುತೇ, ಕಃ ? ಯಮಃ, ಕಿಂ ? ನಿರ್ವಾಣಾಲಾತ ಲಾಘವಂ (ಸ, ಪ್ರ) ಕಸ್ಮಿನ್ನಪಿ ? ಅಸ್ಮಿನ್ನಪಿ, ಕಥಂಭೂತೇಽಸ್ಮಿನ್ ಅನೋಕಹೇ. ಕಥಂಭೂತಃ ? ವಿಲಿಖನ್, ಕಾಂ ? ಭೂಮಿಂ. ಕೇನ ? ದಂಡೇನ, ಕಥಂಭೂತೇನ ದಂಡೇನ ? ಅಸ್ತಮಿತತ್ವಿಷಾ.

ವಿಗ್ರಹ---(೬) ಅಸ್ತಮಿತಾ-ತ್ವಿಟ್ ಯಸ್ಯ ಸಃ - ಅಸ್ತಮಿತತ್ವಿಟ್ (ಷ, ಬ, ವ್ರೀ) + ತೇನ (೯) ನಮೋಕಹಃ-ಅನೋಕಹಃ (ನ, ಞ್, ತ) + ತಸ್ಮಿನ್, (೧೧) ನಿರ್ವಾಣಂಚ ತತ್ ಅಲಾತಂಚ, ನಿರ್ವಾಣಾಲಾತಂ (ವಿ, ಪೂರ್ವ. ಕ) ನಿರ್ವಾಣಾತಸ್ಯ ಲಾಘವಂ - ನಿರ್ವಾಣಾ ಲಾತಲಾಘವಂ (ಷ, ತ) + ತತ್.

ಧಾತುರೂಪ--- (೬) ಕುರುತೇ, ಕುರ್ವಾತೇ, ಕುರ್ವತೇ.
ಕುರುಷೇ, ಕುರ್ವಾಥೇ, ಕುರುಧ್ವೇ.
ಕುರ್ವೇ, ಕುರ್ವಹೇ, ಕುರ್ಮಹೇ.

ಧಾತ್ವರ್ಥ---(ಡುಕೃಞ್-ಕರಣೇ) ಮಾಡುವಿಕೆ, ಎಂಬರ್ಥವುಳ್ಳ 'ತನಾದಿ' ೮ನೆಯ ಗಣದ 'ಡುಕೃಞ್' ಎಂಬ ಉಭಯ ಪದಿ ಧಾತುವು ಆತ್ಮನೇ ಪದದ 'ಲಟ್' ಲಕಾರದ ವರ್ತಮಾನಕಾಲ, ಪ್ರ, ಏ, ದಲ್ಲಿದು.

ವಿಶೇಷ—( ೩ ) 'ವಿ, ಎಂಬುಪಸರ್ಗ ಪೂರ್ವಕವಾದ 'ಲಿಖ' ಧಾತುವಿಗೆ ವರ್ತಮಾನಾರ್ಥದಲ್ಲಿ 'ಶತೃ' ಪ್ರತ್ಯಯವು ಸೇರಿದೆ. ( ೬ ) 'ಅಸ್ತಂ' ಎಂಬುದು ಮಕಾರಾಂತಾವ್ಯಯವು, 'ಇತ' ಇಲ್ಲಿ 'ಇಣ್'( ಇ) ಎಂಬ ಧಾತುವಿಗೆ 'ಕ್ತ, ಪ್ರತ್ಯಯವು ಸೇರಿದೆ; ಅಸ್ತಮಿತತ್ವಿಟ್, ಎಂಬಲ್ಲಿ 'ತ್ವಿಟ್, ಶಬ್ದವು ಸ್ತ್ರೀಲಿಂಗವಾಗಿದ್ದರೂ ಬಹುವ್ರೀಹಿಯಲ್ಲಿ ಪುಲ್ಲಿಂಗವಾಗಿ 'ಕ್ವಿಪ್, ಪ್ರತ್ಯಯವನ್ನು ಪಡೆದಿರುವುದು (೯) ಮೋಘವೆಂದರೆ ವ್ಯರ್ಥವಾದುದೆಂದರ್ಥವು. ನ ಮೋಘಃ-ಅಮೋಘಃ (ನಞ್. ತ) ಸಾರ್ಥಕವಾದುದು. (೧೧) ಅಲಾತ, ಉಲ್ಮುಕ, ಇವೆರಡೂ ಕೊಳ್ಳಿಗೆ ಹೆಸರು. 'ವಾ, ಎಂಬ ಸತ್ಯಾರ್ಥಕವಾದ ಧಾತುವಿಗೆ 'ನಿರ್, ಎಂಬ ಉಪಸರ್ಗವು ಸೇರಿದೆ. 'ಕ್ತ, ಪ್ರತ್ಯಯವು ಸೇರಿ'ನಿರ್ವಾತ' ವೆಂಬದಾಗಿ, ವಾತವೆಂಬ ಸ್ಥಳದಲ್ಲಿರುವ ನಿಷ್ಠಾಸಂಜ್ಞೆಯುಳ್ಳ ತಕಾರಕ್ಕೆ 'ನ, ಕಾರಾದೇಶವು ಬರುವುದೆಂದು ಭಾವಿಸಿ, ಸೂತ್ರದಲ್ಲಿ 'ನಿರ್ವಾಣ, ಎಂಬ ಶಬ್ದವನ್ನೇ ನಿಪಾತಮಾಡಿದ್ದಾರೆ. ಈ ಶ್ಲೋಕದಲ್ಲಿ ಯಮದಂಡವು ಕೊಳ್ಳಿಯ ಲಾಘವವನ್ನು ಪಡೆಯಿತು, ಎಂಬ ವಾಕ್ಯಾರ್ಥದಿಂದ ಯಮದಂಡ ಪದಾರ್ಥದಲ್ಲಿ, ಉಲ್ಮುಕ ( ಕೊಳ್ಳಿ ) ಪದಾರ್ಥದ ವೃತ್ತಿಯು ತೋರಿಬರುವುದರಿಂದ 'ಪದಾರ್ಥವೃತ್ತಿ, ಎಂಬ ನಿದರ್ಶನಾಲಂಕಾರ ಭೇದವು ॥೨೩॥

ಶ್ಲೋ॥ ಅಮೀ ಚ ಕಥ ಮಾದಿತ್ಯಾಃ ಪ್ರತಾಪಕ್ಷತಿಶೀತಲಾಃ ।

ಚಿತ್ರನ್ಯಸ್ತಾ ಇವ ಗತಾಃ ಪ್ರಕಾಮಾಲೋಕನೀಯತಾಂ ॥೨೪॥

ಪದ—(೧) ಅಮೀ (೨) ಚ (೩) ಕಥಂ (೪) ಆದಿತ್ಯಾಃ (೫) ಪ್ರತಾಪಕ್ಷತಿಶೀತಲಾಃ (೬) ಚಿತ್ರನ್ಯಸ್ತಾಃ (೭) ಇವ (೮) ಗತಾಃ (೯) ಪ್ರಕಾಮಾಲೋಕನೀಯತಾಂ.

ಶಬ್ದ—(೧) ಮ, ಪು, ಪ್ರ, ಬ. (೨, ೩, ೭) ಅವ್ಯ. (೪, ೬, ೫, ೮) ಅ, ಪು, ಪ್ರ, ಬ (೯) ಆ, ಸ್ತ್ರೀ, ದ್ವಿ, ಏ.

ಅನ್ವಯ—ಪ್ರತಾಪಕ್ಷತಿಶೀತಲಾಃ ಅಮೀ ಆದಿತ್ಯಾಶ್ಚ ಕಥಂ ಚಿತ್ರನ್ಯಸ್ತಾ ಇವ ಪ್ರಕಾಮಾಲೋಕನೀಯತಾಂ ಗತಾಃ ।

ಅರ್ಥ—ಪ್ರತಾಪ-ತೇಜಸ್ಸಿನ, ಕ್ಷತಿ-ನಾಶದಿಂದ, ಶೀತಲಾಃ-ತಣ್ಣ

ಗಾಗಿರುವ, ಅಮೀ-ಈ, ಆದಿತ್ಯಾಃ-ಸೂರ್ಯರೊಟ್ಟಿಗೂಡ, ಕಥಂ-ಯಾವಕಾರಣದಿಂದ, ಚಿತ್ರ - ಚಿತ್ರದಲ್ಲಿ, ನ್ಯಸ್ತಾ ಇವ-ಬರೆಯಲ್ಪಟ್ಟವರೋಪಾದಿಯಲ್ಲಿ, ಪ್ರಕಾಮು-ಅತ್ಯಂತವಾಗಿ, ಆಲೋಕನೀಯತಾಂ-ದರ್ಶನಾರ್ಹತೆಯನ್ನು, ಗತಾಃ-ಹೊಂದಿದರೋ !

ತಾತ್ಪರ್ಯ—ಅತ್ಯುಷ್ಣವಾದ ತನ್ನ ತೇಜಸ್ಸು ಅಡಗಿ ಹೋದುದರಿಂದ ಸೂರ್ಯನು ತಂಪಾಗಿರುವನು. ಅದರಿಂದ ಚಿತ್ರಪಟದಲ್ಲಿ ಬಣ್ಣದಿಂದ ಬರೆದಿರುವಂತೆ ಆಗಿ ಎಲ್ಲರಿಗೂ ಸುಲಭವಾಗಿ ದರ್ಶನಮಾಡುವುದಕ್ಕೆ ಅನುಕೂಲನಾಗಿರುವನು.

ಆಕಾಂಕ್ಷೆ—ಗತಾಃ, ಕೇ ? ಆದಿತ್ಯಾಃ, ಕಾಂ ? ಪ್ರಕಾಮಾಲೋಕನೀಯತಾಂ ( ಸ, ಪ್ರ ) ಕ ಇವ ? ಚಿತ್ರನ್ಯಸ್ತಾ ಇವ, ಕಥಂಭೂತಾ ಆದಿತ್ಯಾಃ ? ಅಮೀ, ಪುನಃ ಕಥಂಭೂತಾ ಆದಿತ್ಯಾಃ ? ಪ್ರತಾಪಕ್ಷತಿ ಶೀತಲಾಃ.

ವಿಗ್ರಹ—(೧) ಪ್ರತಾಪಸ್ಯ ಕ್ಷತಿಃ - ಪ್ರತಾಪಕ್ಷತಿಃ ( ಷ, ತ ) ಪ್ರತಾಪಕ್ಷತ್ಯಾ ಶೀತಲಾಃ-ಪ್ರತಾಪಕ್ಷತಿ ಶೀತಲಾಃ (ತೃ, ತ) (೨) ಚಿತ್ರೇ ನ್ಯಸ್ತಾಃ-ಚಿತ್ರನ್ಯಸ್ತಾಃ (ಸ, ತ) (೩) ಪ್ರಕಾಮಂ ಆಲೋಕನೀಯತಾ-ಪ್ರಕಾಮಾಲೋಕನೀಯತಾ- (ವಿ, ಪೂರ್ವ.ಕ) + ತಾಂ,

ವಿಶೇಷ—(೪) ಅದಿತೇಃ ಅಪತ್ಯಾನಿ ಪುಮಾಂಸಃ-ಆದಿತ್ಯಾಃ (ತ, ವೃ) ಅಪತ್ಯಾರ್ಥದಲ್ಲಿ 'ಣ್ಯತ್' ಪ್ರತ್ಯಯವು ಬಂದಿದೆ. ಆದಿತ್ಯರು-ಮಿತ್ರ, ರವಿ, ಸೂರ್ಯ, ಭಾನು, ಖಗ, ಪೂಷ, ಹಿರಣ್ಯಗರ್ಭ, ಮರೀಚಿ, ಆದಿತ್ಯ, ಸವಿತೃ, ಅರ್ಕ, ಭಾಸ್ಕರ, ಎಂದು ೧೨ ಮಂದಿ. ಆದಿತ್ಯ-ಸೂರ್ಯ, ದೇವತೆಗಳು,(ನಾನಾ)(೫) 'ಗಮ್' ಎಂಬ ಧಾತುವಿಗೆ ಕರ್ತ್ರರ್ಥದಲ್ಲಿ 'ಕ್ತ' ಪ್ರತ್ಯಯವು ಸೇರಿ ಧಾತುವಿನ ಕೊನೆಯ ಮಕಾರಕ್ಕೆ ಲೋಪ ಬಂದಿದೆ, (೬) ಆಲೋಕಯಿತುಂ ಯೋಗ್ಯಃ - ಆಲೋಕನೀಯಃ (ತ, ವೃ) 'ಛ' ಪ್ರತ್ಯಯವು ಸೇರಿದೆ, ಆಲೋಕನೀಯಸ್ಯ ಭಾವಃ - ಆಲೋಕನೀಯತಾ (ತ, ವೃ) ಭಾವಾರ್ಥದಲ್ಲಿ 'ತಲ್' ಪ್ರತ್ಯಯವೂ, ಸ್ತ್ರೀಲಿಂಗದಲ್ಲಿ 'ಟಾಪ್' ಪ್ರತ್ಯಯವೂ (ಆ) ಬಂದಿದೆ. ಈ ಶ್ಲೋಕದಲ್ಲಿ 'ಚಿತ್ರಗತಪ್ರತಿಮೆಯಂತೆ ಸೂರ್ಯನು ದೃಶ್ಯನಾದನು.' ಎಂಬ ವಾಕ್ಯಾರ್ಥದಿಂದ

ಉಪಮಾಲಂಕಾರವು ತೋರುವುದು ॥೨೪॥

ಶ್ಲೋ॥ ಪರ್ಯಾಕುಲತ್ವಾನ್ಮರುತಾಂ ವೇಗಭಂಗೋಽನುಮೀಯತೇ ।
ಅಂಭಸಾಮೋಘಸಂರೋಧಃ ಪ್ರತೀಪಗಮನಾದಿವ ॥ ೨೫ ॥

ಪದ—(೧)ಪರ್ಯಾಕುಲತ್ವಾತ್ (೨) ಮರುತಾಂ (೩) ವೇಗಭಂಗಃ (೪) ಅನುಮೀಯತೇ (೫) ಅಂಭಸಾಂ (೬) ಓಘಸಂರೋಧಃ (೭) ಪ್ರತೀಪಗಮನಾತ್ (೮) ಇವ.

ಶಬ್ದ—(೧, ೭) ಅ, ನ, ಪು, ಏ (೨) ತ, ಪು, ಷ, ಬ, (೬) ಅ, ಪು, ಪ್ರ, ಏ (೪) ಕ್ರಿ (೫) ಸ, ನ, ಷ, ಬ (೮) ಅನ್ವ.

ಅನ್ವಯ—ಪ್ರತೀಪಗಮನಾತ್ ಅಂಭಸಾಂ ಓಘಸಂರೋಧ ಇವ, ಪರ್ಯಾಕುಲತ್ವಾತ್ ಮರುತಾಂ ವೇಗಭಂಗಃ ಅನುಮೀಯತೇ.

ಅರ್ಥ—ಪ್ರತೀಪ - ಪ್ರವಹಿಸುತ್ತಿರುವಾಗ ದಿಣ್ಣೆಗಳಿಂದ ಧುಮುಕುತ್ತಾ, ಗಮನಾತ್ - ಹರಿಯೋಣದರಿಂದ, ಅಂಭಸಾಂ - ನೀರಿನ, ಓಘ - ಪ್ರವಾಹದ. ಸಂರೋಧ ಇವ - ತಡೆಯಂತೆ, ಪರ್ಯಾಕುಲತ್ವಾತ್ - ಮುಗ್ಗರಿಸುತ್ತಾ ಬೀಳುವುದರಿಂದ, ಮರುತಾಂ - ವಾಯುವಿನ, ವೇಗ - ವೇಗದ, ಭಂಗಃ - ವಿಚ್ಛೇದವು, ಅನುಮೀಯತೇ- ಊಹಿಸಲ್ಪಡುತ್ತದೆ.

ತಾತ್ಪರ್ಯ—ಎತ್ತರದಿಂದ ಧುಮುಕಿ ಧುಮುಕಿ ಹರಿಯೋಣದರಿಂದ ಪ್ರವಾಹದ ವೇಗವು ಹೇಗೆ ಕಡಿಮೆಯಾಗಿರುವುದು ಗೊತ್ತಾಗುವುದೋ ಹಾಗೆ, ಭಯದಿಂದ ಎಡವಿ ಎಡವಿ ಮುಗ್ಗರಿಸುತ್ತಾ ನಡೆಯುವುದರಿಂದ ವಾಯುವಿನ ವೇಗವು ಕಡಿಮೆಯಾಗಿದೆಯೋ ಎನ್ನುವಂತೆ ತೋರುವುದು.

ಆಕಾಂಕ್ಷೆ—ಅನುಮೀಯತೆ! ಕೈಃ? (ಜನೈಃ) ಕಃ? ವೇಗಭಂಗಃ (ಕ, ಪ್ರ) ಕೇಷಾಂ ? ಮರುತಾಂ, ಕಸ್ಮಾತ್? ಪರ್ಯಾಕುಲತ್ವಾತ್, ಕ ಇವ ? ಓಘಸಂರೋಧ ಇವ ಕೇಷಾಂ ? ಅಂಭಸಾಂ, ಕಸ್ಮಾತ್? ಪ್ರತೀಪಗಮನಾತ್.

ವಿಗ್ರಹ—(೩) ವೇಗಸ್ಯ ಭಂಗಃ ವೇಗಭಂಗಃ (ಷ, ತ) (೬) ಓಘಸ್ಯಸಂರೋಧಃ-ಓಘಸಂರೋಧಃ (ಷ, ತ) (೭) ಪ್ರತೀಪಂಚ ತತ್

ಗಮನಂಚ,ಪ್ರತೀಪಗಮನಂ (ವಿ, ಪೂರ್ವ, ಕ) + ತಸ್ಮಾತ್.

ಧಾತುರೂಪ—(೪)

ಅನುಮೀಯತೇ, ಅನುಮೀಯೇತೇ, ಅನುಮೀಯಂತೇ.

ಅನುಮೀಯಸೇ, ಅನುಮೀಯೇಥೇ, ಅನುಮೀಯಧ್ವೇ.

ಅನುಮೀಯೇ, ಅನುಮೀಯಾವಹೇ, ಅನುಮೀಯಾಮಹೇ,

ಧಾತ್ವರ್ಥ—( ಮಾಙ್ - ಮಾನೇ ) ಅಳೆಯುವಿಕೆ, ಎಂಬರ್ಥವುಳ್ಳ, 'ಜುಹೋತ್ಯಾದಿ' ಮೂರನೆಯ ಗಣದ 'ಮಾಙ್' ಎಂಬ ಆತ್ಮನೇಪದಿ ಧಾತುವಿಗೆ 'ಅನು' ಎಂಬ ಉಪಸರ್ಗವು ಸೇರಿ 'ಊಹಿಸುವಿಕೆ' ಎಂಬರ್ಥವುಳ್ಳದ್ದಾಗಿ ಕರ್ಮಾರ್ಥದ ವರ್ತಮಾನಕಾಲದ 'ಲಟ್' ಲಕಾರದ ಪ್ರಥಮ ಪುರುಷೈಕವಚನವಾಗಿದೆ.

ವಿಶೇಷ—(೧) ಪರ್ಯಾಕುಲಸ್ಯ ಭಾವಃ-ಪರ್ಯಾಕುಲತ್ವಂ (ತ, ವೃ) ಭಾವಾರ್ಥದಲ್ಲಿ 'ತ್ವ' ಪ್ರತ್ಯಯವು ಬಂತು,(೨)ಆವಹ, ವಿವಹ,ಸಂವಹ, ಉದ್ವಹ, ಪರಿವಹ, ಪ್ರವಹ, ಪರಾವಹ, ಎಂಬದಾಗಿ ಏಳು ವಾಯುಗಳುಂಟು.(೪) ಮಾಙ್, (ಮಾ) ಎಂಬ ಧಾತುವು ಆಕಾರಾಂತವಾಗಿರುವುದರಿಂದಲೂ, ಅದಕ್ಕೆ ಪರವಾಗಿರುವ ಕರ್ಮಾರ್ಥದ ಯಕ್ (ಯ) ಪ್ರತ್ಯಯವು 'ಕಿತ್' (ಕಕಾರವು ಲೋಪವಾಗುವ ಪ್ರತ್ಯಯವು) ಆದುದರಿಂದಲೂ, ಧಾತ್ವಂತದ ಆಕಾರಕ್ಕೆ ಈಕಾರಾದೇಶವು ಬಂತು. (೭) ಪ್ರತಿ + ಅಪ - ಪ್ರತೀಪ, ಪ್ರತಿ, ಎಂಬುದು.ಉಪಸರ್ಗವಾದುದರಿಂದ ಅದಕ್ಕೆ ಪರವಾಗಿರುವ ಅಪ ಶಬ್ದದ ಆದಿಯಲ್ಲಿರುವ ಆಕಾರಕ್ಕೆ ಈಕಾರಾದೇಶವು ಬಂತು, ಹಿಂದಣ ಇಕಾರದೊಡನೆ ಸವರ್ಣದೀರ್ಘಸಂಧಿಯಾಗಿದೆ 'ನದಿಯ ವೇಗವು ಧುಮುಕುವುದರಿಂದ ಹೇಗೆ ಕಡಿಮೆಯಾಗುವುದೋ ಹಾಗೆ' ವಾಯುವು ಹೆದರಿ ಮುಗ್ಗರಿಸುವುದರಿಂದ ವೇಗವು ಕಡಿಮೆಯಾಗಿದೆ' ಎಂಬಲ್ಲಿ ಉಪಮಾಲಂಕಾರವು, ವಾಯುವಿನಲ್ಲಿರುವ ಮಾಂದ್ಯಕ್ಕೆ ಮುಗ್ಗರಿಸುವುದು ಕಾರಣವಲ್ಲದಿದ್ದರೂ ಕಾರಣವೆಂದು ಹೇಳಿರುವುದರಿಂದ ಸಿದ್ಧ ಹೇತೂತ್ಪ್ರೇಕ್ಷಾಲಂಕಾರವು ||೨೫||

ಶ್ಲೋ|| ಆವರ್ಜಿತ ಜಟಾ ಮೌಳಿ ವಿಲಂಬಿ ಶಶಿಕೋಟಯಃ ।

ರುದ್ರಾಣಾ ಮಪಿ ಮೂರ್ಧಾನಃ ಕ್ಷತಹುಂಕಾರ ಶಂಸಿನಃ || ೨೬ ||

ಪದ—(೧) ಆವರ್ಜಿತ ಜಟಾಮೌಳಿ ವಿಲಂಬಿ ಶಶಿಕೋಟಯಃ (೨) ರುದ್ರಾಣಾಂ (೩) ಅಪಿ (೪) ಮೂರ್ಧಾನಃ (೫) ಕ್ಷತ ಹುಂಕಾರಶಂಸಿನಃ.

ಶಬ್ದ—(೧) ಇ, ಪು, ಪ್ರ, ಬ (೨) ಅ, ಪು, ಷ, ಬ (೩) ಅವ್ಯ, (೪, ೫) ನ, ಪು, ಪ್ರ, ಬ.

ಅನ್ವಯ—ಆವರ್ಜಿತ ಜಟಾ ಮೌಳಿ ವಿಲಂಬಿ ಶಶಿಕೋಟಯಃ ರುದ್ರಾಣಾಮಪಿ ಮೂರ್ಧಾನಃ ಕ್ಷತಹುಂಕಾರ ಶಂಸಿನಃ.

ಅರ್ಥ—ಆವರ್ಜಿತ - (ಅವಮಾನದಿಂದ) ಬಗ್ಗಿಸಿದ, ಜಟಾ-ಜಡೆಗಳುಳ್ಳ, ಮೌ-ಳಿತಲೆಗಳಲ್ಲಿ, ವಿಲಂಬಿ-ಜೋಲಾಡುತ್ತಿರುವ, ಶಶಿ-ಚಂದ್ರನ, ಕೋಟಯಃ - ರೇಖೆಗಳುಳ್ಳ, ರುದ್ರಾಣಾಂ - ಏಕಾದಶ ರುದ್ರರ, ಮೂರ್ಧಾನಃ - ತಲೆಗಳು (ಮುಖಗಳು) ಕ್ಷತ-ನಾಶವಾದ, ಹುಂಕಾರ-ಹುಂಕಾರಶಬ್ದಗಳನ್ನು, ಶಂಸಿನಃ-ಹೇಳುವಂತಹವು (ಆಗಿವೆ)

ತಾತ್ಪರ್ಯ—ಏಕಾದಶ ರುದ್ರರು ತಮಗಾದ ಅವಮಾನದಿಂದ ತಲೆಯನ್ನು ಬಗ್ಗಿಸಲಾಗಿ, ಅವರ ಜಟಾಮಂಡಲಗಳಲ್ಲಿ ಚಂದ್ರರೇಖೆಗಳು ಜೋಲಾಡುತ್ತಿರುವುವು, ಪರಪರಿಭವದಿಂದ ಕೋಪವು ಬಂದರೂ, ಹುಂಕಾರಗಳಿಂದ ಶತ್ರುವಿಗೆ ಪ್ರತೀಕಾರಮಾಡುವ ಶಕ್ತಿ ಇಲ್ಲದೆ ಸುಮ್ಮಗಾದವರಂತೆ ತೋರುವುದು.

ಆಕಾಂಕ್ಷೆ—ಕ್ಷತಹುಂಕಾರ ಶಂಸಿನಃ (ಭವಂತಿ) ಕೇ? ಮೂರ್ಧಾನಃ (ಅಪ್ರ) ಕೇಷಾಮಪಿ? ರುದ್ರಾಣಾಮಪಿ, ಕಥಂಭೂತಾಃ ಮೂರ್ಧಾನಃ? ಆವರ್ಜಿತ ಜಟಾಮೌಳಿ ವಿಲಂಬಿ ಶಶಿಕೋಟಯಃ.

ವಿಗ್ರಹ-ಜಟಾನಾಂ ಮೌಳಯಃ-ಜಟಾಮೌಳಯಃ (ಷ, ತ) ಆವರ್ಜಿತಾಶ್ಚ ತೇ ಜಟಾಮೌಳಯಶ್ಚ-ಆವರ್ಜಿತ ಜಟಾಮೌಳಯಃ (ವಿ, ಪೂರ್ವ, ಕ) ಆವರ್ಜಿತಜಟಾಮೌಳಿಷು ವಿಲಂಬಿನಃ-ಆವರ್ಜಿತ ಜಟಾಮೌಳಿ ವಿಲಂಬಿನಃ (ಸ, ತ) ಶಶಿನಾಂ ಕೋಟಯಃ (ಷ ತ) ಆವರ್ಜಿತಜಟಾಮೌಳಿ ವಿಲಂಬಿನಃ ಶಶಿಕೋಟಯಃ ಯೇಷಾಂತೆ. ಆವರ್ಜಿತ ಜಟಾಮೌಳಿ ವಿಲಂಬಿಶಶಿಕೋಟಯಃ (ಷ, ಬ, ವ್ರೀ) (೧) ಕ್ಷತಾಶ್ಚ ತೇ ಹುಂಕಾರಾಶ್ಚ-ಕ್ಷತಹುಂಕಾರಾಃ (ವಿ, ಪೂರ್ವ, ಕ) ಕ್ಷತಹುಂಕಾರಾಣಾಂ ಶಂಸಿನಃ-ಕ್ಷತ

ಹುಂಕಾರಶಂಸಿನಃ (ಷ, ತ)

ವಿಶೇಷ—(೧) ಕೋಟಿ, ಅತಿಶಯ, ಬಿಲ್ಲಿನ ತುದಿ, ಸಂಖ್ಯಾಭೇದ, ಅಂಚು, ಪಕ್ಷಾಂತರ (ನಾನಾ) (೨) ಹರ, ತ್ರ್ಯಂಬಕ, ರುದ್ರ, ಮೃಗ, ವ್ಯಾಧ, ಕಪಾಲೀ, ರೈವತ, ಶಂಭು, ಕಪರ್ದಿ, ವೃಷಾಕಪಿ, ಬಹುರೂಪ, ಈ೧೧, ಏಕಾದಶರುದ್ರರು, (೫) ಹುಂಕಾರ = ಅಹಂಕಾರ, (ಶಾ) ಶಂಸಂತೀತಿ ಶಂಸಿನಃ) (ತ, ವೃ,) 'ಣಿನಿ' ಪ್ರತ್ಯಯವು ಬಂತು. ರುದ್ರರಿಗೆ ಹುಂಕಾರವೇ ಆಯುಧವು. ಅಂದರೆ ಆಯುಧಗಳು ಶತ್ರುನಿಗ್ರಹಕ್ಕೆ ಹೇಗೆ ಸಾಧನಗಳೋ ಹಾಗೆ ಆಯುಧರೂಪಗಳಾಗಿವೆ. ಅಂತಹ ಹುಂಕಾರಗಳನ್ನುಚ್ಚರಿಸುವ ಶಕ್ತಿ ಇಲ್ಲದೆ ಹೋದುದರಿಂದ ನಷ್ಟಾಯುಧತ್ವವನ್ನು ಸೂಚಿಸುವಂತಿತ್ತೆಂದು ಭಾವವು ||೨೬||

ಶ್ಲೋ|| ಲಬ್ಧಪ್ರತಿಷ್ಠಾಃ ಪ್ರಥಮಂ ಯೂಯಂ ಕಿಂ ಬಲವತ್ತರೈಃ |
ಅಪವಾದೈ ರಿವೋ ತ್ಸರ್ಗಾಃ ಕೃತವ್ಯಾವೃತ್ತಯಃ ಪರೇ||೨೭||

ಪದ—(೧) ಲಬ್ಧಪ್ರತಿಷ್ಠಾಃ (೨) ಪ್ರಥಮಂ (೩) ಯೂಯಂ (೪) ಕಿಂ (೫) ಬಲವತ್ತರೈಃ (೬) ಅಪವಾದೈಃ [೭] ಇವ (೮) ಉತ್ಸರ್ಗಾಃ (೯) ಕೃತವ್ಯಾವೃತ್ತಯಃ (೧೦) ಪರೇ.

ಶಬ್ದ—(೧, ೮) ಅ, ಪು, ಪ್ರ, ಬ (೨, ೪, ೭) ಅವ್ಯ (೩) ದ, ಪ್ರ, ಪ್ರ, ಬ [೫, ೬] ಅ, ಪು, ಪ್ರ, ಬ [೯] ಇ, ಪು, ಪ್ರ, ಬ (೧೦) ಅ, ಪು, ಪ್ರ, ಬ, (ಸರ್ವ)

ಅನ್ವಯ—ಪ್ರಥಮಂ ಲಬ್ಧಪ್ರತಿಷ್ಠಾಃ ಯೂಯಂ ಬಲವತ್ತರೈಃ ಪರೈಃ; ಉತ್ಸರ್ಗಾಃ ಅಪವಾದೈರಿವ ಕೃತವ್ಯಾವೃತ್ತಯಃ ಕಿಂ?

ಅರ್ಥ—ಪ್ರಥಮಂ - ಮೊದಲು, ಲಬ್ಧ - ಹೊಂದಲ್ಪಟ್ಟ, ಪ್ರತಿಷ್ಠಾಃ - ಸ್ಥಿತಿಯುಳ್ಳವರಾಗಿ, ( ಅವಕಾಶವುಳ್ಳವುಗಳಾಗಿ ) ಯೂಯಂ- ನೀವು, ಬಲವತ್ತರೈಃ-ಬಲಿಷ್ಠರಾದ, ( ಅವಕಾಶರಹಿತಗಳಾದ) ಪರೈಃ- ಶತ್ರುಗಳಿಂದ, ಉತ್ಸರ್ಗಾಃ - ಸಾಮಾನ್ಯ ಶಾಸ್ತ್ರಗಳು, ( ಸೂತ್ರ ) ಅಪವಾದೈರಿವ-ವಿಶೇಷ ಶಾಸ್ತ್ರಗಳಿಂದಲೋಪಾದಿಯಲ್ಲಿ, ಕೃತ-ಮಾಡಲ್ಪಟ್ಟ, ವ್ಯಾವೃತ್ತಯಃ ಕಿಂ? ಪ್ರತಿಷ್ಠಾಭಂಗವುಳ್ಳವರು (ವಿಷಯಸಂಕೋಚವುಳ್ಳವುಗಳು) ಆದಿರೇನು?

ತಾತ್ಪರ್ಯ—ಪ್ರವೃತ್ತಿಗೆ ಅವಕಾಶವುಳ್ಳ ಸಾಮಾನ್ಯ ಶಾಸ್ತ್ರವು ದುರ್ಬಲವಾಗಿರುವುದರಿಂದ, ಪ್ರಬಲವಾದ ವಿಶೇಷಶಾಸ್ತ್ರವು ಅದರ ಪ್ರವೃತ್ತಿಯನ್ನು ಸಂಕೋಚ ಪಡಿಸುವುದು, ಎಂಬುದು ಶಾಸ್ತ್ರಕಲ್ಪಿತವಾದ ಮರ್ಯಾದೆಯು, ಅದರಂತೆಯೇ ಮೊದಲು ನೀವು ಮೊದಲು ಸುಸ್ಥಿತಿಯನ್ನು ಸಂಪಾದಿಸಿದ್ದು, ಈಗ ಪ್ರಬಲರಾದ ಶತ್ರುಗಳಿಂದ ಬಾಧಿತರಾಗಿ ನಿಮ್ಮ ನಿರುಪಾಧಿಕಸ್ಥಿತಿಯನ್ನು ಕಳೆದುಕೊಂಡು ದುಃಖಪಡುತ್ತಿರುವಿರಾ! ಎಂದು ಭಾವವು.

ಆಕಾಂಕ್ಷೆ—ಕೃತವ್ಯಾವೃತ್ತಯಃ ಕಿಂ? (ಕಾ. ಕ್ರಿ) ಕೇ? ಯೂಯಂ, ಕೈಃ? ಪರೈಃ? (ಕ. ಪ್ರ) ಕೈರಿವ? ಅಪವಾದೈರಿವ, ಕೇ? ಉತ್ಸರ್ಗಾಃ, ಕಥಂಭೂತೈಃ ಪರೈಃ? ಬಲವತ್ತರೈಃ, ಕಥಂಭೂತಾಃ ಯೂಯಂ? ಲಬ್ಧಪ್ರತಿಷ್ಠಾಃ, ಕದಾ? ಪ್ರಥಮಂ.

ವಿಗ್ರಹ:—(೧) ಲಬ್ಧಾ ಪ್ರತಿಷ್ಠಾ ಯೈಸ್ತೇ - ಲಬ್ಧಪ್ರತಿಷ್ಠಾಃ [ತ್ರಿ. ಬ ವ್ರೀ.] (೯) ಕೃತಾ ವ್ಯಾವೃತ್ತಿಃ ಯೈಸ್ತೇ - ಕೃತವ್ಯಾವೃತ್ತಯಃ [ತ್ರಿ. ಬ. ವ್ರೀ]

ವಿಶೇಷ:—(೫)ಬಲಂ ಯೇಷಾಂ ಸಂತೀತಿ-ಬಲವಂತಃ (ತ ವೃ.) ಮತುಪ್, ಪ್ರತ್ಯಯವು ಬಂತು ಬಲವತಾಂ ಶ್ರೇಷ್ಠಾಃ-ಬಲವತ್ತರಾಃ [ತ. ವೃ.] ಶ್ರೇಷ್ಠಾರ್ಥದಲ್ಲಿ 'ತರಪ್' ಪ್ರತ್ಯಯವು ಬಂದಿದೆ [೬] ಅಪೋದ್ಯಂತೇ ಏಭಿರಿತ್ಯಪವಾದಾಃ [ತೃ. ವೃ] 'ವದ' ಧಾತುವಿಗೆ 'ಅಪ' ಎಂಬುಪಸರ್ಗವು ಸೇರಿ ಕರಣಾರ್ಥದಲ್ಲಿ 'ಘ ಞ' ಪ್ರತ್ಯಯವು ಬಂದಿದೆ. ಅಪವಾದ ಶಾಸ್ತ್ರವು, ವಿಶೇಷ ಶಾಸ್ತ್ರವೆನ್ನಿಸುವುದು, ಆದ್ದರಿಂದ ಅದು ಪ್ರಬಲವಾಗುವದು. ಪ್ರಬಲೇನ ದುರ್ಬಲಸ್ಯ ಬಾಧಃ, ಎಂಬ ನ್ಯಾಯಾನುಸಾರವಾಗಿ ಸಾಮಾನ್ಯ ಶಾಸ್ತ್ರದ ಪ್ರವೃತ್ತಿಯನ್ನು ಸಂಕೋಚಪಡಿಸುವುದು. ಉದಾಹರಣೆ—'ಮಾಹಿಂಸ್ಯಾತ್' ಅಂದರೆ ಜೀವ ಹಿಂಸೆ ಮಾಡಕೂಡದು, ಎಂಬುದು ಸಾಮಾನ್ಯಶಾಸ್ತ್ರವು. ಇದಕ್ಕೆ 'ಗಾಮಾಲಭೇತ' ಅಂದರೆ-ವೇದೋಕ್ತವಾದ ಯಜ್ಞಾರ್ಥವಾಗಿ ಗೋವನ್ನು ಹಿಂಸೆ ಪಡಿಸಬಹುದು. ಲೌಕಿಕ ಪ್ರಯೋಜನಕ್ಕಾಗಿ ಕೂಡದು, ಎಂಬುದು ವಿಶೇಷ ಶಾಸ್ತ್ರವಾಗಿ 'ಮಾಹಿಂಸ್ಯಾತ್' ಎಂಬುದಕ್ಕೆ ಅಪವಾದವಾಗಿ

ರುವುದು, ಈ ಅಪವಾದದಿಂದ ಹಿಂಸೆಯನ್ನೇ ಮಾಡಕೂಡದೆಂದು ಸರ್ವ್ವತ್ರ ಪ್ರವರ್ತಿಸಿದ್ದ ನಿಷೇಧವನ್ನು ಯಜ್ಞಾರ್ಥವಾದ ಗೋವಿನ ವಿಷಯದಲ್ಲಿ ಪರಿಹಾರವನ್ನು ಹೇಳಿ ಪ್ರವೃತ್ತಿಯನ್ನು ತಪ್ಪಿಸಿದುದರಿಂದ, ಆಸಾಮಾನ್ಯಶಾಸ್ತ್ರ ಪ್ರವೃತ್ತಿಯು ಸಂಕೋಚವಾಯಿತು । ವಿಷಯ ಸಂಕೋಚ ಏವ ಬಾಧಃ, ಎಂದು ನ್ಯಾಯವಿರುವುದರಿಂದ ಸಾಮಾನ್ಯ ಶಾಸ್ತ್ರವು ಅಪವಾದ ಶಾಸ್ತ್ರದಿಂದ ಬಾಧಿತವಾದಂತಾಯಿತು ಎಂದು ತಿಳಿಯ ತಕ್ಕದ್ದು. ಈಶ್ಲೋಕದಲ್ಲಿ ಮೊದಲು ಪೂಜ್ಯಭಾವವನ್ನು ಹೊಂದಿದ್ದು ಈಗ ಪ್ರಬಲರಾದ ಶತ್ರುಗಳಿಂದ ಬಾಧಿತರಾಗಿದ್ದಾರೆ ಎಂಬ ಉಪಮೇಯವಾಕ್ಯವೂ, ಸಾಮಾನ್ಯಶಾಸ್ತ್ರವು ವಿಶೇಷಶಾಸ್ತ್ರದಿಂದ ಬಾಧಿತವಾಗುವದು. ಎಂಬ ಉಪಮಾನವಾಕ್ಯವೂ ಇರುವದರಿಂದಲೂ, ಎರಡುವಾಕ್ಯಗಳಿಗೂ ಶ್ಲೇಷಘಟಿತವಾಗಿರುವುದರಿಂದಲೂ, ಶ್ಲೇಷೋಪಮಾಲಂಕಾರವು ॥೨೬॥

ಶ್ಲೋ॥ ತದ್ಬ್ರೂತ ವತ್ಸಾಃ ಕಿ ಮಿತಃ ಪ್ರಾರ್ಥಯಧ್ವಂ ಸಮಾಗತಾಃ।
ಮಯಿ ಸೃಷ್ಟಿರ್ಹಿ ಲೋಕಾನಾಂ ರಕ್ಷಾ ಯುಷ್ಮಾಸ್ವವಸ್ಥಿತಾ ॥

ಪದ—(೧) ತತ್ (೨) ಬ್ರೂತ (೩) ವತ್ಸಾಃ (೪) ಕಿಂ (೫) ಇತಃ (೬) ಪ್ರಾರ್ಥಯಧ್ವಂ (೭) ಸಮಾಗತಾಃ (೮) ಮಯಿ (೯) ಸೃಷ್ಟಿಃ (೧೦) ಹಿ (೧೧) ಲೋಕಾನಾಂ (೧೨) ರಕ್ಷಾ (೧೩) ಯುಷ್ಮಾಸು (೧೪) ಅವಸ್ಥಿತಾ.

ಶಬ್ದ—(೧, ೫, ೧೦) ಅವ್ಯ (೨, ೬) ಕ್ರಿ (೩) ಅ, ಪು, ಪ್ರ, ಬ (೪) ಮ, ನ, ಪ್ರ, ಏ (೭) ಅ, ಪು, ಪ್ರ, ಬ (೮) ದ, ಪು, ಸ, ಏ [೯] ಇ, ಸ್ತ್ರೀ, ಪ್ರ, ಏ (೧೧) ಅ, ಪು, ಷ, ಬ (೧೨, ೧೪) ಆ, ಸ್ತ್ರೀ, ಪ್ರ, ಏ (೧೩) ದ, ಪು, ಸ, ಬ.

ಅನ್ವಯ---ತತ್ ವತ್ಸಾಃ (ಯೂಯಂ) ಸಮಾಗತಾಃ, ಇತಃ ಕಿಂ ? ಪ್ರಾರ್ಥಯಧ್ವಂ. ಮಯಿಲೋಕಾನಾಂ ಸೃಷ್ಟಿಃ, ರಕ್ಷಾ ಯುಷ್ಮಾಸು ಅವಸ್ಥಿತಾಹಿ। ಬ್ರೂತ.

ಅರ್ಥ—ತತ್-ಆದಕಾರಣ, ವತ್ಸಾಃ-ಎಲೈ ಮಕ್ಕಳಿರಾ ! (ಯೂಯಂ-ನೀವು,) ಸಮಾಗತಾಃ-ಒಟ್ಟಾಗಿ ಬಂದಿರುವಿರಿ, ಇತಃ-ಈ ನನ್ನ ದೆಸೆಯಿಂದ, ಕಿಂ-ಏನು?(ಆಗಬೇಕು) ಪ್ರಾರ್ಥಯಧ್ವ-ಬೇಡಿಕೊಳ್ಳಿ, ಮಯಿ-

ನನ್ನಲ್ಲಿ, ಲೋಕಾನಾಂ-ಲೋಕಗಳ, ಸೃಷ್ಟಿಃ-ಉತ್ಪತ್ತಿಯು (ಮಾತ್ರವೇ ಆಗುವುದು) ರಕ್ಷಾ-ಪಾಲನೆಯು, ಯುಷ್ಮಾಸು-ನಿಮ್ಮಲ್ಲಿ, ಅವಸ್ಥಿತಾಹಿ-ಸೇರಿದೆಯಲ್ಲವೇ ! ಬ್ರೂತ-ಹೇಳಿ.

ತಾತ್ಪರ್ಯ—ಎಲೈ ದೇವತೆಗಳಿರಾ ! ನೀವು ಶತ್ರುಗಳಾದ ರಾಕ್ಷಸರಿಂದ ದುರವಸ್ಥೆಯನ್ನು ಹೊಂದಿರುವುದರಿಂದ ಎಲ್ಲರೂ ಒಟ್ಟಾಗಿ ಬಂದಿರುವಿರಿಯಷ್ಟೆ ? ಈಗ ನನ್ನಿಂದಾಗಬೇಕಾದ ಕಾರ್ಯವೇನು ? ಕೇಳಿಕೊಳ್ಳಿ. ನಾನು ಜಗತ್ಸೃಷ್ಟಿಯನ್ನು ಮಾತ್ರವೇ ಮಾಡುವೆನು ಪಾಲನೆಯನ್ನು ಮಾಡತಕ್ಕವರು ನೀವೇ ಅಲ್ಲವೇ ಹೇಳಿ.

ಆಕಾಂಕ್ಷೆ—ಬ್ರೂತ, ಕೇ ? ಯೂಯಂ, (ಕಿಂ ? ವಚಃ, ಕಂ ? ಮಾಂ)(ದ್ವಿ. ಕರ್ತೃ. ಪ್ರ) ಅವಸ್ಥಿತಾಹಿ, ಕಾ? ರಕ್ಷಾ, ಕೇಷು? ಯುಷ್ಮಾಸು, ಅವಸ್ಥಿತಾ, ಕಾ ? ಸೃಷ್ಟಿಃ, ಕಸ್ಮಿನ್? ಮಯಿ, ಕೇಷಾಂ ? ಲೋಕಾನಾಂ, ಪ್ರಾರ್ಥಯತ,ಕೇ ? ಯೂಯಂ, ಕಂ? ಮಾಂ (ಸ. ಪ್ರ) ಕಥಂಭೂತಾಃ ಯೂಯಂ ? ಸಮಾಗತಾಃ, ಕಥಂಭೂತಾಃ ? ವತ್ಸಾಃ, ಕುತಃ ? ತತ್,

ವಿಗ್ರಹ— ಸಂಭೂಯ ಆಗತಾಃ-ಸಮಾಗತಾಃ (ಪ್ರಾದಿ ಸ) (೭)

ಧಾತುರೂಪ—(೬)

ಪ್ರಾರ್ಥಯತಾಂ, ಪ್ರಾರ್ಥಯೇತಾಂ, ಪ್ರಾರ್ಥಯಂತಾಂ
ಪ್ರಾರ್ಥಯಸ್ವ, ಪ್ರಾರ್ಥಯೇಥಾಂ, ಪ್ರಾರ್ಥಯಧ್ವಂ
ಪ್ರಾರ್ಥಯೈ, ಪ್ರಾರ್ಥಯಾವಹಿ, ಪ್ರಾರ್ಥಯಾಮಹಿ

ಧಾತ್ವರ್ಥ—( ಅರ್ಥ - ಉಪಯಾಚ್ಞಾಯಾಂ ) ಯಾಚಿಸುವಿಕೆ, ಎಂಬರ್ಥವುಳ್ಳ 'ಚುರಾದಿ, ಹತ್ತನೆ ಯಗಣದ 'ಅರ್ಥ, ಎಂಬ ಆತ್ಮನೇಪದಿ ಧಾತುವು 'ಉಪ, ಎಂಬ ಉಪಸರ್ಗದೊಡನೆ ಲೋಟ್ ಲಕಾರದ ಆಜ್ಞಾರ್ಥದ, ಮಧ್ಯಮ ಪುರುಷ ಬಹುವಚನದಲ್ಲಿದೆ.

ಧಾತುರೂಪ—(೨) ಬ್ರವೀತು } ಬ್ರೂತಾತ್ } ಬ್ರೂತಾಂ, ಬ್ರುವಂತು
ಬ್ರೂಹಿ(ತಾತ್) ಬ್ರೂತಂ, ಬ್ರೂತ
ಬ್ರವಾಣಿ ಬ್ರವಾವ, ಬ್ರವಾಮ

ಧಾತ್ವರ್ಥ— (ಬ್ರೂಞ್-ವ್ಯಕ್ತಾಯಾಂವಾಚಿ) ಮಾತಾಡುವಿಕೆ, ಎಂಬರ್ಥವುಳ್ಳ, 'ಅದಾದಿ, ಎರಡನೆಯ ಗಣದ, ಉಭಯಪದಿ 'ಬ್ರೂಞ್, ಎಂಬ ಧಾತುವು 'ಲೋಟ್, ಲಕಾರದ ವಿಧ್ಯರ್ಥದ ಆತ್ಮನೇ ಪದದ ಮಧ್ಯಮಪುರುಷ ಬಹುವಚನದಲ್ಲಿದೆ.

ವಿಶೇಷ—(೨) 'ಬ್ರೂಞ್, ಧಾತುವು ದ್ವಿಕರ್ಮಕವು,(೩)ವತ್ಸ= ಶಿಶು, ಪುತ್ರ, ಕರು, ಸಂವತ್ಸರ, ಎದೆ, (ನಾನಾ) (೫) ಪಂಚಮೀವಿಭಕ್ತ್ಯರ್ಥದಲ್ಲಿ 'ತಸಿಲ್, ಪ್ರತ್ಯಯವು ಬಂತು (೬) ಪಾದಾರ್ಥಯಥ್ಯೇ (ಪಾ) (೧೧) ಭೂತಾನಾಂ (ಪಾ) (೧೩)ಜಗತ್ಪಾಲನಾಧಿಕಾರವು ನಿಮ್ಮನ್ನೇ ಹೊಂದಿರುವುದರಿಂದ ಈವಿಷಯದಲ್ಲಿ ನೀವು ನನ್ನನ್ನು ಅಪೇಕ್ಷಿಸಬೇಕಾದುದಿಲ್ಲವೆಂಬ ಭಾವವು ॥೨೪॥

ಶ್ಲೋ॥ ತತೋ ಮಂದಾನಿಲೋದ್ಧೂತ ಕಮಲಾಕರಶೋಭಿನಾ ॥
ಗುರಂ ನೇತ್ರ ಸಹಸ್ರೇಣ ನೋದಯಾಮಾಸ ವಾಸವಃ ॥೨೫॥

ಪದ—(೧) ತತಃ (೨) ಮಂದಾನಿಲೋದ್ಧೂತಕಮಲಾಕರಶೋಭಿನಾ (೩) ಗುರುಂ (೪) ನೇತ್ರಸಹಸ್ರೇಣ (೫) ನೋದಯಾಮಾಸ (೬) ವಾಸವಃ

ಶಬ್ದ—(೧)ಅವ್ಯ (೨) ನ. ಸ.ತೃ, ಏ (೩) ಉ, ಪು, ದ್ವಿ, ಏ. (೪) ಅ, ನ, ತೃ, ಏ (೫) ಕ್ರಿ (೬) ಅ, ಪು, ಪ್ರ, ಏ.

ಅನ್ವಯ—ತತಃ ವಾಸವಃ ಮಂದಾನಿಲೋದ್ಧೂತಕಮಲಾಕರಶೋಭಿನಾ ನೇತ್ರ ಸಹಸ್ರೇಣ ಗುರುಂ ನೋದಯಾಮಾಸ.

ಅರ್ಥ—ತತಃ-ಅನಂತರದಲ್ಲಿ, ವಾಸವಃ-ಇಂದ್ರನು, ಮಂದ-ನಿಧಾನವಾದ, ಅನಿಲ-ಗಾಳಿಯಿಂದ, ಉದ್ಧೂತ - ಅಲುಗಾಡಿಸಲ್ಪಟ್ಟ, ಕಮಲಾಕರ-ಸರೋವರದ,ಶೋಭಿನಾ-ಕಾಂತಿಯುಳ್ಳ, ನೇತ್ರಸಹಸ್ರೇಣ-ಸಾವಿರ ಕಣ್ಣುಗಳಿಂದಲೂ, ಗುರುಂ-ಮಂತ್ರಿಯಾದ ಬೃಹಸ್ಪತಿಯನ್ನು, ನೋದಯಾಮಾಸ-ಪ್ರೇರಿಸಿದನು.

ತಾತ್ಪರ್ಯ—ಬ್ರಹ್ಮನು ಪ್ರಶ್ನೆಮಾಡಿದ ಅನಂತರದಲ್ಲಿ ಇಂದ್ರನು ಬಹು ಕುತೂಹಲವುಳ್ಳವನಾಗಿ ಮಂದಮಾರುತನಿಂದ ಸ್ವಲ್ಪವಾಗಿ ಚಲಿಸುತ್ತಿರುವ ಕಮಲಗಳಿಂದೊಪ್ಪುತ್ತಿರುವ ಸರೋವರದಂತೆ ಹೊಳೆಯುತ್ತಿ

ರುವ, ತನ್ನ ಸಾವಿರ ಕಣ್ಣುಗಳಿಂದಲೂ, ಸರ್ವಕಾರ್ಯಜ್ಞನಾಗಿಯೂ, ವಾಗ್ಮಿಯಾಗಿಯೂ, ತನ್ನ ಮಂತ್ರಿಯಾಗಿಯೂ ಇರುವ ಗುರುವನ್ನು ಕುರಿತು ಪರಮಾತ್ಮನಿಗೆ ಪ್ರತ್ಯುತ್ತರವನ್ನು ಹೇಳುವಂತೆ ಸನ್ನೆಮಾಡಿ ಪ್ರೋತ್ಸಾಹಿಸಿದನು.

ಆಕಾಂಕ್ಷೆ—ನೋದಯಾಮಾಸ, ಕಃ? ವಾಸವಃ, ಕಂ ? ಗುರುಂ, (ಸ. ಪ್ರ) ಕೇನ? ನೇತ್ರಸಹಸ್ರೇಣ, ಕಥಂಭೂತೇನ ನೇತ್ರಸಹಸ್ರೇಣ? ಮಂದಾನಿಲೋದ್ಧೂತ ಕಮಲಾಕರಶೋಭಿನಾ, ಕದಾ ? ತತಃ.

ವಿಗ್ರಹ—(೧) ಮಂದಶ್ಚಾಸೌ ಅನಿಲಶ್ಚ-ಮಂದಾನಿಲಃ (ವಿ. ಪೂ, ಕ.) ಕಮಲಾನಾಂ ಆಕರಃ-ಕಮಲಾಕರಃ (ಷ, ತ) ಮಂದಾನಿಲೇನ ಉದ್ಧೂತಃ-ಮಂದಾನಿಲೋದ್ಧೂತಃ (ತೃ, ತ) ಮಂದಾನಿಲೋದ್ಧೂತಶ್ಚಾಸೌ ಕಮಲಾಕರಶ್ಚ-ಮಂದಾನಿಲೋದ್ಧೂತ ಕಮಲಾಕರಃ (ವಿ, ಪೂರ್ವ, ಕ) ಮಂದಾನಿಲೋದ್ಧೂತಕಮಲಾಕರಸ್ಯ ಶೋಭೇವ ಶೋಭಾ ಯಸ್ಯ ತತ್-ಮಂದಾನಿಲೋದ್ಧೂತಕಮಲಾಕರಶೋಭಿ (ಉ, ನ. ಷ, ಬ, ವ್ರೀ,) + ತೇನ, (೪) ನೇತ್ರಾಣಾಂ ಸಹಸ್ರಂ-ನೇತ್ರಸಹಸ್ರಂ (ಷ, ತ,) + ತೇನ.

ಧಾತುರೂಪ—(೫)

ನೋದಯಾಮಾಸ, ನೋದಯಾಮಾಸತುಃ, ನೋದಯಾಮಾಸುಃ
ನೋದಯಾಮಾಸಿಥ, ನೋದಯಾಮಾಸಥುಃ, ನೋದಯಾಮಾಸ,
ನೋದಯಾಮಾಸ, ನೋದಯಾಮಾಸಿವ, ನೋದಯಾಮಾಸಿಮ,

ಧಾತ್ವರ್ಥ—(ಣುದ-ಪ್ರೇರಣೇ) ಪ್ರೇರಿಸುವಿಕೆ, ಎಂಬರ್ಥವುಳ್ಳ, 'ತುದಾದಿ' ಆರನೆಯ ಗಣದ ಉಭಯಪದಿ 'ಣುದ, ಎಂಬ ಧಾತುವಿಗೆ ಪ್ರೇರಣಾರ್ಥದಲ್ಲಿ ಣಿಚ್, (ಅಯ) ಪ್ರತ್ಯಯವು ಸೇರಿ ಸನಾದ್ಯಂತವಾದ 'ನೋದಯ, ಎಂದಾಗಿ, ಪರಸ್ಮೈಪದದ 'ಲಿಟ್, ಲಕಾರದಲ್ಲಿ 'ಆಮ್, ಪ್ರತ್ಯಯವೂ, 'ಅಸ್, ಧಾತುವಿನ ಅನುಪ್ರಯೋಗವೂ ಉಂಟಾಗಿ, ಭೂತಕಾಲದ ಪ್ರಥಮಪುರುಷೈಕವಚನದಲ್ಲಿದೆ.

ವಿಶೇಷ—(೧) ಸಪ್ತಮ್ಯರ್ಥದಲ್ಲಿ 'ತಸಿಲ್, ಪ್ರತ್ಯಯವು ಬಂದಿದೆ. (೨) ಬಹುವ್ರೀಹಿಯಲ್ಲಿ ಪದಾಂತಕ್ಕೆ 'ಣಿನಿ, ಪ್ರತ್ಯಯವು ಬಂದಿದೆ, (ತ, ವೃ) (೪) ಶತ, ಸಹಸ್ರ, ಮೊದಲಾದ ಸಂಖ್ಯಾವಚನಗಳು ಬಹುವಚನಾರ್ಥವನ್ನು

ಹೇಳಿದರೂ ಏಕ ವಚನಾಂತವಾಗಿಯೇ ಇರಬೇಕೆಂದು ವಿಧಿಯಿದೆ, (೫) ಧಾತ್ವಾದಿಯ ಣಕಾರಕ್ಕೆ ನಕಾರಾದೇಶವು ಬಂತು. ಚೋದಯಾ ಮಾಸ, ಪ್ರೇರಯಾಮಾಸ (ಪಾ) ದೇವತೆಗಳು ಅನಿಮಿಷರಾದರೂ ಪ್ರಯ ತ್ನಪೂರ್ವಕವಾಗಿ ಅಕ್ಷಿಸ್ಫುರಣವು ವಿರೋಧವಲ್ಲ. ಈಶ್ಲೋಕದಲ್ಲಿ 'ನೇ ತ್ರಸಹಸ್ರವು ಕಮಲಾಕರದಹಾಗೆ ಶೋಭೆಯುಳ್ಳುದಾಗಿತ್ತು,' ಎಂಬ ವಾಕ್ಯಾರ್ಥವಿರುವುದರಿಂದ ಉಪಮಾಲಂಕಾರವು 'ಇವ,' ಎಂಬ ವಾಚಕ ಶಬ್ದವಿಲ್ಲದುದರಿಂದ ವಾಚಕಲುಪ್ತೋಪಮೆಯು.॥೨೯॥

ಶ್ಲೋ॥ ಸ ದ್ವಿನೇತ್ರಂ ಹರೇಶ್ಚಕ್ಷುಃ ಸಹಸ್ರನಯನಾಧಿಕಂ।
ವಾಚಸ್ಪತಿರುವಾಚೇದಂ ಪ್ರಾಂಜಲಿ ರ್ಜಲಜಾಸನಂ ॥೩೦॥

ಪದ—(೧) ಸಃ (೨) ದ್ವಿನೇತ್ರಂ (೩) ಹರೇಃ (೪) ಚಕ್ಷುಃ (೫) ಸಹಸ್ರನಯನಾಧಿಕಂ (೬) ವಾಚಸ್ಪತಿಃ (೭) ಉವಾಚ (೮) ಇದಂ (೯) ಪ್ರಾಂಜಲಿಃ (೧೦) ಜಲಜಾಸನಂ.

ಶಬ್ದ—(೧) ದ, ಪು, ಪ್ರ, ಏ, [೨, ೫] ಅ, ನ, ಪ್ರ, ಏ (೩) ಇ, ಪು, ಷ, ಏ (೪) ಸ, ನ, ಪ್ರ, ಏ (೬, ೯) ಇ, ಪು, ಪ್ರ, ಏ (೭) ಕ್ರಿ, (೮) ಮ, ನ, ದ್ವಿ, ಏ (೧೦) ಅ, ಪು, ದ್ವಿ, ಏ,

ಅನ್ವಯ—ಹರೇಃ ಸಹಸ್ರ ನಯನಾಧಿಕಂ ದ್ವಿನೇತ್ರಂ ಚಕ್ಷುಃ ಸಃವಾಚಸ್ಪತಿಃ, ಪ್ರಾಂಜಲಿಸ್ಸನ್ ಜಲಜಾಸನಂ ಇದಂ ಉವಾಚ

ಅರ್ಥ—ಹರೇಃ-ಇಂದ್ರನ, ಸಹಸ್ರ-ಸಾವಿರ, ನಯನ-ಕಣ್ಣುಗಳಿ ಗಿಂತಲೂ, ಅಧಿಕಂ-ಹೆಚ್ಚಾದ (ಶ್ರೇಷ್ಠವಾದ), ದ್ವಿ-ಎರಡು, ನೇತ್ರಂ ಕಣ್ಣುಗಳುಳ್ಳ, ಚಕ್ಷುಃ-ಚಕ್ಷುರಿಂದ್ರಿಯಭೂತನಾದ, ಸಃ-ಆ, ವಾಚಸ್ಪತಿಃ-ಗುರುವು, ಪ್ರಾಂಜಲಿಸ್ಸನ್-ಅಂಜಲಿಬದ್ಧನಾಗಿ, ಜಲಜಾಸನಂ - ಬ್ರಹ್ಮನ ನ್ನು ಕುರಿತು, ಇದಂ-ಈ ವಚನವನ್ನು ಉವಾಚ-ಹೇಳಿದನು.

ತಾತ್ಪರ್ಯ—ಗೋಚರವಸ್ತುಗಳನ್ನು ಮಾತ್ರ ತಿಳಿವುದಾದ್ದರಿಂದ ಇಂದ್ರನಿಗೆ ತನ್ನ ಸಾವಿರ ಕಣ್ಣಿಗಿಂತಲೂ ಶ್ರೇಷ್ಠವಾಗಿ, ಅಗೋಚರ ವಸ್ತು ಗ್ರಹಣಸಮರ್ಥವಾದ ಎರಡುಕಣ್ಣುಗಳುಳ್ಳ ಬೇರೊಂದು ನೇತ್ರೇಂ ದ್ರಿಯ ಭೂತನಾದ ಆಗುರುವು ಬ್ರಹ್ಮನನ್ನು ಕುರಿತು ಬದ್ಧಾಂಜಲಿಪುಟ ನಾಗಿ ಇಂತೆಂದನು.

ಆಕಾಂಕ್ಷೆ—ಉವಾಚ, ಕಃ ? ವಾಚಸ್ಪತಿಃ, ಕಂ? ಜಲಜಾಸನಂ ಕಿಂ ? ಇದಂ (ದ್ವಿ, ಕರ್ಮ, ಕರ್ತೃ) ಕಥಂಭೂತಸ್ಸಃ ? ಪ್ರಾಂಜಲಿಸ್ಸಃ, ಕಥಂಭೂತಃ ವಾಚಸ್ಪತಿಃ ? ಸಃ, ಪುನಃ ಕಥಂಭೂತಃ ವಾಚಸ್ಪತಿಃ ? ಚಕ್ಷುಃ, ಕಥಂಭೂತಂ ಚಕ್ಷುಃ ? ದ್ವಿನೇತ್ರಂ, ಪುನಃ ಕಥಂಭೂತಂ ಚಕ್ಷುಃ! ಸಹಸ್ರನಯನಾಧಿಕಂ ಕಸ್ಯ? ಹರೇಃ

ವಿಗ್ರಹ—ದ್ವೇ ನೇತ್ರೇ ಯಸ್ಯತತ್-ದ್ವಿನೇತ್ರಂ (ಷ, ಬ, ವ್ರೀ) (೫) ಸಹಸ್ರಂಚ ತತ್-ನಯನಾನಿಚ, ಸಹಸ್ರನಯನಾನಿ (ದ್ವಿಗು) ಸಹಸ್ರನಯನೇಭ್ಯೋಽಧಿಕಂ. ಸಹಸ್ರನಯನಾಧಿಕಂ (ಪಂ, ತ) (೬) ವಾಚಃಪತಿಃ-ವಾಚಸ್ಪತಿಃ (ಅಲುಕ್) (೯) ಪ್ರಕೃಷ್ಟಃ ಅಂಜಲಿಃ ಯಸ್ಯ ಸಃ - ಪ್ರಾಂಜಲಿಃ (ಪ್ರಾ, ಬ, ವ್ರೀ) (೧೦) ಜಲಜಂ ಆಸನಂ ಯಸ್ಯ ಸಃ-ಜಲಜಾಸನಃ (ಷ, ಬ, ವ್ರೀ) + ತಂ.

| ಧಾತುರೂಪ—(೭) | | | |
|---|---|---|---|
| | ಉವಾಚ, | ಊಚತುಃ, | ಊಚುಃ |
| | ಉವಚಿಥ, ಉವಕ್ಥ, | ಊಚಥುಃ, | ಊಚ, |
| | ಉವಾಚ, ಉವಚ, | ಊಚಿವ, | ಊಚಿಮ, |

ಧಾತ್ವರ್ಥ—(ವಚಪರಿಭಾಷಣೇ) ಮಾತನಾಡುವಿಕೆ, ಎಂಬರ್ಥವುಳ್ಳ ‹ಅದಾದಿ, ಎರಡನೆಯ ಗಣದ ಉಭಯಪದಿ ‹ವಚ, ಎಂಬ ಧಾತುವು ಪರಸ್ಮೈಪದದ ‹ಲಟ್, ಲಕಾರದ ಭೂತರೂಪದ ಪ್ರಥಮಪುರುಷೈಕವಚನದಲ್ಲಿದೆ.

ವಿಶೇಷ—(೫)ಸಹಸ್ರಶಬ್ದವು ಸಂಖ್ಯಾವಾಚಕವಾದುದರಿಂದ ಏಕವಚನವು (೬) ಕಸ್ಕಾದಿಗಣದಲ್ಲಿ ಸೇರುವುದರಿಂದ ಅಲುಕ್ಸಮಾಸವಾಗಿದೆ, ವಿಸರ್ಗಕ್ಕೆ ಸತ್ವವೂಬಂತು, (೧೦) ಕಮಲವೇ ಪೀಠವಾಗಿವುಳ್ಳವನು (ಅವ) ಈ ಶ್ಲೋಕದಲ್ಲಿ ಗುರುವನ್ನು ನೇತ್ರರೂಪವಾಗಿ ಪರಿಣಾಮ ಮಾಡಿದುದರಿಂದ (ಬದಲಾಯಿಸುವುದು) ಪ್ರಕೃತಕಾರ್ಯವಾದ ಅಗೋಚರವಸ್ತುವನ್ನು ನೋಡುವಿಕೆಯು ಸಿದ್ಧಿಸಿದುದರಿಂದ ಪರಿಣಾಮಾಲಂಕಾರವು॥೩೦॥

ಶ್ಲೋ॥ ಏವಂ ಯದಾತ್ಥ ಭಗವನ್ನಾಮೃಷ್ಟಂ ನಃ ಪರೈಃ ಪದಂ ।

ಪ್ರತ್ಯೇಕಂ ವಿನಿಯುಕ್ತಾತ್ಮಾ ಕಥಂ ನಜ್ಞಾಸ್ಯಸಿ ಪ್ರಭೋ ॥೩೦।

ಪದ—(೧) ಏವಂ (೨) ಯತ್ (೩) ಆತ್ಥ (೪) ಭಗವನ್ (೫) ಆಮೃಷ್ಟಂ (೬) ನಃ (೭) ಪರೈಃ (೮) ಪದಂ (೯) ಪ್ರತ್ಯೇಕಂ (೧೦) ವಿನಿಯುಕ್ತಾತ್ಮಾ (೧೧) ಕಥಂ (೧೨) ನ (೧೩) ಜ್ಞಾಸ್ಯಸಿ (೧೪)ಪ್ರಭೋ.

ಶಬ—(೧, ೨, ೯, ೧೧, ೧೨) ಅವ್ಯ (೩, ೧೩) ಕ್ರಿ (೪) ತ, ಪು, ಸಂ, ಏ (೫, ೮) ಅ, ನ, ಪ್ರ, ಏ (೬) ದ, ಪು, ಷ, ಒ (೭) ಅ, ಪು, ತೃ, ಬ [೧೦] ನ, ಪು, ಪ್ರ, ಏ [೧೪] ಉ, ಪು, ಸಂ, ಏ.

ಅನ್ವಯ—ಭಗವನ್ ಏವಂ ಯದಾತ್ಥ, (ತತ್) ನಃ ಪದಂ ಪರೈಃ ಆಮೃಷ್ಟಂ, ಪ್ರಭೋ ಪ್ರತ್ಯೇಕಂ ವಿನಿಯುಕ್ತಾತ್ಮಾ ಕಥಂ ನಜ್ಞಾಸ್ಯಸಿ.

ಅರ್ಥ—ಭಗವನ್-ಎಲೈ ಬ್ರಹ್ಮನೇ, ಏವಂ-ಹೀಗೆ, ಯತ್-ಯಾವ ಕಾರಣದಿಂದ, ಆತ್ಥ - ಹೇಳುತ್ತೀಯೋ ! ತತ್ - ಆಕಾರಣದಿಂದಲೇ, ನಃ-ನಮ್ಮ, ಪದಂ-ಸ್ಥಾನವು, [ಸ್ವರ್ಗವು] ಪರೈಃ-ಶತ್ರುಗಳಿಂದ, ಆಮೃಷ್ಟಂ - ಆಕ್ರಾಂತವಾಯಿತು ಪ್ರಭೋ-ಸ್ವಾಮಿಯೇ, ಪ್ರತ್ಯೇಕಂ - ಎಲ್ಲಜೀವಿಗಳಲ್ಲಿಯೂ, ವಿನಿಯುಕ್ತ - ವ್ಯಾಪ್ತವಾದ ಆತ್ಮಾ-ಸ್ವಭಾವವುಳ್ಳ (ನೀನು) ಕಥಂ-ಹೇಗೆ, ನಜ್ಞಾಸ್ಯಸಿ-ತಿಳಿಯದಿರುವಿ ?

ತಾತ್ಪರ್ಯ—ಎಲೈ ಭಗವಂತನಾದ ಬ್ರಹ್ಮನೇ! ಶತ್ರುಗಳು ಬಲಿಷ್ಠರಾಗಿ ನಿಮ್ಮನ್ನುತಳ್ಳಿ ಸ್ವರ್ಗವನ್ನು ಆಕ್ರಮಿಸಿದರೇ ? ಎಂದು ನೀನು ಪೂರ್ವದಲ್ಲಿ ಮಾಡಿದ ಪ್ರಶ್ನೆಯಂತೆಯೇ, ನಮ್ಮಪದವು (ಅಧಿಕಾರವು) ಪರಾಧೀನವಾಯಿತ್ತೆಂದು ನಿನಗೆ ಗೊತ್ತಾಗಿಯೇ ಇದೆ. ಸರ್ವಾಂತರ್ಯಾಮಿಯಾಗಿರುವ ನೀನು ಕಾಣದಿರುವ ವಿಷಯವೂ ಉಂಟೇ? ನಾವು ವಿಜ್ಞಾಪಿಸಿಕೊಳ್ಳತಕ್ಕದ್ದೇನು ?

ಆಕಾಂಕ್ಷೆ—ಕಥಂನಜ್ಞಾಸ್ಯಸಿ, ಕಃ? (ತ್ವಂ) ಕಿಂ ? (ಇದಂ)( ಸ. ಪ್ರ). ಕಥಭೂತಸ್ತ್ವಂ? ವಿನಿಯುಕ್ತಾತ್ಮಾ, ಕಥಂ ? ಪ್ರತ್ಯೇಕಂ;ಕಥಂಭೂತ ? ಪ್ರಭೋ ! ಆಮೃಷ್ಟಂ, ಕಿಂ? ಪದಂ, ಕೇಷಾಂ. ನಃ, ಕೈಃ? ಪರೈಃ, ಯತ್?ತತ್' ಆತ್ಥ, ಕಃ ? (ತ್ವಂ) ಕಿಂ ? (ಇದಂ) (ಸ. ಪ್ರ) ಕಥಂ? ಏವಂ, ಕಥಂಭೂತ? ಹೇಭಗವನ್.

ವಿಗ್ರಹ—(೯) ಏಕಂ ಏಕಂಪ್ರತಿ-ಪ್ರತ್ಯೇಕಂ(ಅವ್ಯ ಭಾ)(೧೦) ವಿನಿಯುಕ್ತಃ ಆತ್ಮಾ ಯಸ್ಯಸಃ-ವಿನಿಯುಕ್ತಾತ್ಮಾ (ಷ, ಬ, ವ್ರೀ)

ಧಾತುರೂಪ—(೩) ಆಹ, ಆಹತುಃ, ಆಹುಃ
ಆತ್ಥ ಆಹಥುಃ ಬ್ರೂಥ
ಬ್ರವೀಮಿ ಬ್ರೂವಃ, ಬ್ರೂಮಃ

ಧಾತ್ವರ್ಥ—(ಬ್ರೂ ಇಞ್-ವ್ಯಕ್ತಾಯಾಂವಾಚಿ) ಮಾತನಾಡುವಿಕೆ ಎಂಬರ್ಥವುಳ್ಳ, ಅದಾದಿ, ಎರಡನೆಯ ಗಣದ ಉಭಯಪದಿ ಬ್ರೂಇಞ್ ಎಂಬಧಾತುವಿಗೆ ಪರಸ್ಮೈಪದದ ಲಟ್, ಲಕಾರದ ವರ್ತಮಾನಕಾಲ ದಲ್ಲಿ ವಿಕಲ್ಪದಿಂದ ಮೊದಲ ಐದು ರೂಪಗಳಿಗೆ ಆಹ, ಎಂಬಾದೇಶವು ಬಂದು, ಮಧ್ಯಮಪುರುಷೈಕವಚನರೂಪದಲ್ಲಿದೆ

ವಿಶೇಷ—(೨) ಯಥಾ [ಪಾ] (೩) ವರ್ತಮಾನಕಾಲಕ್ಕೆ ಸಮಾ ಪದಲ್ಲಿರುವುದರಿಂದ ಭೂತರೂಪಕ್ಕೆ ವರ್ತಮಾನಕಾಲವು ಬಂತು. (೫) ಆ + ಮೃಜ್ + ತ=ಆಮೃಷ್ಟ, ಮೃಜೋ ಎಂಬ ಧಾತುವಿಗೆ ಆ, ಎಂ ಬ ಉಪಸರ್ಗದೊಡನೆ ಕರ್ಮಾರ್ಥದಕ್ತ. ಪ್ರತ್ಯಯವು ಸೇರಿ, ಧಾತ್ವಂತ ಜಕಾರಕ್ಕೆ ಷಕಾರಾದೇಶವೂ ಪ್ರತ್ಯಯದತಕಾರಕ್ಕೆಷ್ಟುತ್ವದಿಂದ ಟಕಾ ರಾದೇಶವೂ ಬಂದಿದೆ (೭) ಪರ-ಶ್ರೇಷ್ಠ, ಅನ್ಯ, ಶತ್ರು, ಪರಮಾತ್ಮ, ದೂ ರಗತನು, ಜ್ಯೇಷ್ಠನು, (೯) ವೀಪ್ಸೆಯಲ್ಲಿ ಅವ್ಯ. (೧೩) ವರ್ತಮಾನ ಕ್ಕೆ ಬದಲಾಗಿ ಭವಿಷ್ಯತ್ತು, ಜ್ಞಾ, ಧಾತುವಿಗೆ ವಿಕಲ್ಪದಿಂದ ಪರಸ್ಮೈ ಪದ ಬಂದಿದೆ ॥ ೩೧ ॥

ಶ್ಲೋ॥ ಭವಲ್ಲಬ್ಧ ವರೋದೀರ್ಣ ಸ್ತಾರಕಾಖ್ಯೋ ಮಹಾಸುರಃ ।
ಉಪಪ್ಲವಾಯ ಲೋಕಾನಾಂ ಧೂಮಕೇತು ರಿವೋತ್ಥಿತಃ॥೩೨

ಪದ—(೧) ಭವಲ್ಲಬ್ಧವರೋದೀರ್ಣಃ (೨) ತಾರಕಾಖ್ಯಃ (೩) ಮಹಾಸುರಃ (೪) ಉಪಪ್ಲವಾಯ (೫) ಲೋಕಾನಾಂ [೬] ಧೂಮಕೇ ತುಃ (೭) ಇವ [೮] ಉತ್ಥಿತಃ

ಶಬ್ದ—[೧, ೨, ೩, ೮] ಅ, ಪು, ಪ್ರ, ಏ, (೪) ಅ, ಪು, ಚ, ಏ, (೫) ಅ, ಪು, ಷ, ಬ, (೬) ಉ, ಪು, ಪ್ರ ಏ,(೭) ಅವ್ಯ

ಭವಲ್ಲಬ್ಧವರೋದೀರ್ಣಃ ತಾರಕಾಖ್ಯಃ ಮಹಾಸುರಃ ಲೋಕಾ

ನಾಂ ಉಪಪ್ಲವಾಯ ಧೂಮಕೇತುರಿವ ಉತ್ಥಿತಃ

ಅರ್ಥ—ಭವತ್-ನಿನ್ನಿಂದ, ಲಬ್ಧ-ಹೊಂದಿದ, ವರ-ವರದಿಂದ, ಉದೀರ್ಣಃ-ಉದ್ಧತನಾದ, ತಾರಕ-ತಾರಕ ನೆಂಬ,ಆಖ್ಯಃ-ಹೆಸರುಳ್ಳ, ಮಹಾ ದೊಡ್ಡವನಾದ, ಅಸುರಃ-ರಾಕ್ಷಸನು, ಲೋಕಾನಾಂ-ಲೋಕಗಳ, ಉಪಪ್ಲವಾಯ - ಉಪದ್ರವಾರ್ಥವಾಗಿ, ಧೂಮಕೇತುರಿವ - ಧೂಮಕೇತುವೆಂಬ [ದುರ್ನಿಮಿತ್ತ] ಉತ್ಪಾತದಹಾಗೆ ಉತ್ಥಿತಃ-ಹುಟ್ಟಿದನು

ತಾತ್ಪರ್ಯ—ಎಲೈ ಬ್ರಹ್ಮನೇ ? ನಿನ್ನ ವರಬಲದಿಂದ ಉನ್ಮತ್ತನಾಗಿ ಬಹುದುಷ್ಟನಾದ ತಾರಕನೆಂಬ ಮಹಾರಾಕ್ಷಸನು ಲೋಕಕ್ಕೆ ಉತ್ಪಾತಸೂಚಕವಾದ ಧೂಮಕೇತುವಿನಂತೆ ಪ್ರಪಂಚವನ್ನೆಲ್ಲಾ ನಾಶ ಮಾಡುವದಕ್ಕೆ ಹುಟ್ಟಿದ್ದಾನೆ.

ಆಕಾಂಕ್ಷೆ—ಉತ್ಥಿತಃ, ಕಃ ? ಮಹಾಸುರಃ, ಕಇವ? ಧೂಮಕೇತುರಿವ, ಕಸ್ಮೈ ? ಉಪಪ್ಲವಾಯ, ಕೇಷಾಂ? ಲೋಕಾನಾಂ, ಕಥಂಭೂತಃ ಮಹಾಸುರಃ? ತಾರಕಾಖ್ಯಃ, ಪುನಃಕಥಂಭೂತೋ ಮಹಾಸುರಃ ? ಭವಲ್ಲಬ್ಧ ವರೋದೀರ್ಣಃ

ವಿಗ್ರಹ—(೧) ಭವತಃ-ಲಬ್ಧಃ-ಭವಲ್ಲಬ್ಧಃ [ಪಂ ತ] ಭವಲ್ಲಬ್ಧಶ್ಚಾಸೌವರಶ್ಚ-ಭವಲ್ಲಬ್ಧವರಃ[ವಿ. ಪೂರ್ವ, ಕ]ಭವಲ್ಲಬ್ಧವರೇಣ ಉದೀರ್ಣಃ-ಭವಲ್ಲಬ್ಧವರೋದೀರ್ಣಃ [ತೃ ತ] (೨) ತಾರಕ ಇತಿ ಆಖ್ಯಾಯಸ್ಯಸಃ ತಾರಕಾಖ್ಯಃ (ಷ. ಬ. ವ್ರೀ) (೩) ಮಹಾಂಶ್ಚಾಸಾವಸುರಶ್ಚ-ಮಹಾಸುರಃ [ವಿ, ಪೂರ್ವ, ಕ]

ವಿಶೇಷ—[೧] ಭವತ್ + ಲಬ್ಧ= ಭವಲ್ಲಬ್ಧ, ತಕಾರಕ್ಕೆ ಲಕಾರಾದೇಶ; ಪರಸವರ್ಣಸಂಧಿ [೩] ಅಸುರ-ದೇವತೆಯಲ್ಲದವನು, ಅಮೃತ ಪಾನಮಾಡದವನು, ಪ್ರಾಣಾಪಹಾರಕ, (ಅವ, ಅರ್ಥ) (೪) ತಾದರ್ಥ್ಯದಲ್ಲಿ ಚತುರ್ಥಿ (೬) ಧೂಮಕೇತುವು ಆಕಾಶದಲ್ಲಿ ಕಂಡುಬಂದರೆ ರಾಜ್ಯಾನಿಷ್ಟವೆಂದು ಪ್ರತೀತಿಯುಂಟು, ಆಕಾಲಗಳಲ್ಲಿ ಶುಭಕರ್ಮಗಳನ್ನು ಮಾಡಕೂಡದೆಂದು ಧರ್ಮಶಾಸ್ತ್ರವು (೮) ಉತ್ + ಸ್ಥಿತಃ ಉತ್ಥಿತಃ,ಇಲ್ಲಿ ಪರಪದದ ಆದ್ಯಕ್ಷರವಾದ ಸಕಾರಕ್ಕೆ ಥಕಾರಾದೇಶವು ಬಂತು.ಪೂರ್ವಸವರ್ಣಸಂಧಿ.

ಈ ಶ್ಲೋಕದಲ್ಲಿ 'ತಾರಕಾಸುರನು ಜಗತ್ಕಂಟಕನಾಗಿ ಧೂಮಕೇತುವಿನ ಹಾಗೆ ಹುಟ್ಟಿದನು' ಎಂಬ ವಾಕ್ಯಾರ್ಥವಿರುವುದರಿಂದ ಉಪಮಾಲಂಕಾರವು ॥೩೨॥

ಶ್ಲೋ॥ ಪುರೇ ತಾವನ್ತ ಮೇವಾಸ್ಯ ತನೋತಿ ರವಿ ರಾತಪಂ ।
ದೀರ್ಘಕಾಕಮಲೋನ್ಮೇಷೋ ಯಾವನ್ಮಾತ್ರೇಣ ಸಾಧ್ಯತೇ ॥

ಪದ—(೧) ಪುರೇ (೨) ತಾವನ್ತಂ (೩) ಏವ (೪) ಅಸ್ಯ (೫) ತನೋತಿ (೬) ರವಿಃ (೭) ಆತಪಂ (೮) ದೀರ್ಘಕಾಕಮಲೋನ್ಮೇಷಃ (೯) ಯಾವನ್ಮಾತ್ರೇಣ (೧೦) ಸಾಧ್ಯತೇ.

ಶಬ್ದ—(೧) ಅ, ನ, ಸ, ಏ (೨, ತ, ಪು, ದ್ವಿ, ಏ (೩) ಅವ್ಯ, (೪) ಮ, ಪು, ಷ, ಏ (೫) (೧೦) ಕ್ರಿಯೆ. (೬) ಇ, ಪು, ಪ್ರ, ಏ (೭) ಅ, ಪು, ದ್ವಿ, ಏ (೮) ಅ, ಪು, ಪ್ರ, ಏ (೯) ಅ, ನ, ತೃ, ಏ.

ಅನ್ವಯ— ರವಿಃ, ದೀರ್ಘಕಾಕಮಲೋನ್ಮೇಷಃ ಯಾವನ್ಮಾತ್ರೇಣ ಸಾಧ್ಯತೇ, ತಾವನ್ತಂ ಆತಪಮೇವ ಅಸ್ಯಪುರೇ ತನೋತಿ.

ಅರ್ಥ—ರವಿಃ-ಸೂರ್ಯನು, ದೀರ್ಘಿಕಾ-ಕ್ರೀಡಾರ್ಥವಾದ ಕೊಳಗಳಲ್ಲಿ, ಕಮಲ-ತಾವರೆಗಳ, ಉನ್ಮೇಷಃ-ಬಿರಿಯೋಣವು, ಯಾವನ್ಮಾತ್ರೇಣ-ಎಂತಹ ಪ್ರಮಾಣದಿಂದ, ಸಾಧ್ಯತೇ-ಸಾಧಿಸಲ್ಪಡುತ್ತದೆಯೋ, ತಾವನ್ತಂ-ಅಂತಹ ಪ್ರಮಾಣವುಳ್ಳ, ಆತಪಮೇವ - ಬಿಸಿಲನ್ನೇ, ಅಸ್ಯ-ಈ ತಾರಕನ, ಪುರೇ-ಪಟ್ಟಣದಲ್ಲಿ, ತನೋತಿ-ಉಂಟುಮಾಡುತ್ತಾನೆ.

ತಾತ್ಪರ್ಯ॥ ಸೂರ್ಯನು ಈ ತಾರಕಾಸುರನ ಪುರದಲ್ಲಿ, ಜಲಕ್ರೀಡಾರ್ಥವಾಗಿ ನಿರ್ಮಿಸಿರುವ ಕೊಳಗಳಲ್ಲಿನ ತಾವರೆಗಳು ಅರಳುವುದಕ್ಕೆ ಸಾಕಾದಷ್ಟು ಉಷ್ಣಕಿರಣಗಳನ್ನು ಪ್ರಸರಿಸುವನಲ್ಲದೆ ಅದಕ್ಕಿಂತ ಹೆಚ್ಚಾಗಿ ತಾಪಕರವಾದ ಬಿಸಿಲನ್ನು ಬಿಡದಂತೆ ಜಾಗರೂಕನಾಗಿರುವನು ತಾರಕನ ಭಯವು ಆ ಸೂರ್ಯನಿಗೆ ಬಹಳವಾಗಿದೆ.

ಆಕಾಂಕ್ಷೆ—ತನೋತಿ, ಕಃ? ರವಿಃ, ಕಮೇವ, ಆತಪಮೇವ (ಸ, ಪ್ರ) ಕುತ್ರ? ಪುರೇ, ಕಸ್ಯ? ಅಸ್ಯ, ಕಥಂಭೂತಂ ಆತಪಂ? ತಾವನ್ತಂ, ಸಾಧ್ಯತೇ, ಕೇನ? ಯಾವನ್ಮಾತ್ರೇಣ, ಕಃ? ದೀರ್ಘಕಾಕಮಲೋನ್ಮೇಷಃ (ಕ, ಪ್ರ)

ವಿಗ್ರಹ....[೪] ದೀರ್ಘಕಾಸು, ಕಮಲಾನಿ, ದೀರ್ಘಕಾಕಮಲಾನಿ [ಸ, ತ] ದೀರ್ಘಕಾಕಮಲಾನಾಂ ಉನ್ಮೇಷಃ, ದೀರ್ಘಕಾಕಮಲೋನ್ಮೇಷಃ (ಷ. ತ) (೯) ಯಾವತ್, ಏವ-ಯಾವನ್ಮಾತ್ರಂ [ತ, ವ್ಯ] ಅಥವಾ ಯಾವತೀ, ಮಾತ್ರಾ, ಯಸ್ಯತತ್- ಯಾವನ್ಮಾತ್ರಂ (ಷ, ಬ, ವ್ರೀ) + ತೇನ.

ಧಾತುರೂಪ —(೫) ತನೋತಿ, ತನುತಃ, ತನ್ವಂತಿ
ತನೋಷಿ, ತನುಥಃ, ತನುಥ
ತನೋಮಿ, ತನುವಃ(ನ್ವಃ) ತನ್ಮಃ (ನುಮಃ)

ಧಾತ್ವರ್ಥ—(ತನು-ವಿಸ್ತಾರೇ) ವಿಸ್ತಾರಪಡಿಸುವುದು ಎಂಬರ್ಥವುಳ್ಳ ತನಾದಿ, ೮ನೆಯ ಗಣದ ಉಭಯಪದಿ ತನು, ಎಂಬ ಧಾತುವು ಪರಸ್ಮೈಪದದ 'ಲಟ್' ಲಕಾರದ ವರ್ತಮಾನಕಾಲದ ಪ್ರಥಮಪುರುಷೈಕವಚನರೂಪದಲ್ಲಿದೆ.

ಧಾತುರೂಪ—(೧೦) ಸಾಧ್ಯತೇ, ಸಾಧ್ಯೇತೇ, ಸಾಧ್ಯಂತೇ
ಸಾಧ್ಯಸೇ, ಸಾಧ್ಯೇಥೇ, ಸಾಧ್ಯಧ್ವೇ
ಸಾಧ್ಯೇ, ಸಾಧ್ಯಾವಹೇ, ಸಾಧ್ಯಾಮಹೇ

ಧಾತ್ವರ್ಥ—(ಸಾಧ-ಸಂಸಿದ್ಧೌ) ಸಿದ್ಧಿಸುವಿಕೆ, ಎಂಬ ಅರ್ಥವುಳ್ಳ 'ಸ್ವಾದಿ' ಐದನೆಯ ಗಣದ 'ಸಾಧ' ಎಂಬ ಪರಸ್ಮೈಪದಿ ಧಾತುವಿಗೆ ಕರ್ಮಾರ್ಥದ 'ಲಟ್' ಲಕಾರದ ವರ್ತಮಾನಕಾಲದ ಪ್ರಥಮಪುರುಷೈಕವಚನರೂಪವಾಗಿದೆ.

ವಿಶೇಷ—(೧) ಗುಗ್ಗುಲದಗಿಡ, ಮನೆ, ಸ್ವೀಕರಿಸುವುದು, ದೇಹ, ಪಟ್ಟಣ, (ನಾನಾ) (೯) ಮಾತ್ರ- ಅಲ್ಪ, ಪೂರ್ಣ, ಭಾಗ, ಅವಧಾರಣ ಗಳೆಂಬರ್ಥಗಳಲ್ಲಿ ವರ್ತಿಸುತ್ತದೆ ಈ ಶ್ಲೋಕದಲ್ಲಿ ಸೂರ್ಯನಿಗೆ ಮಂದೋಷ್ಣಸಂಬಂಧವು ಇಲ್ಲದಿದ್ದರೂ ಭಯದಿಂದ ಮಂದೋಷ್ಣತ್ವವುಂಟಾಗಿತ್ತೆಂಬ ಸಂಬಂಧವನ್ನು ಕಲ್ಪಿಸುವುದರಿಂದ ಅಸಂಬಂಧೇ, ಸಂಬಂಧರೂಪವಾದ ಅತಿಶಯೋಕ್ತ್ಯಲಂಕಾರವು ॥೩೩॥

ಶ್ಲೋ॥ ಸರ್ವಾಭಿ ಸ್ಸರ್ವದಾ ಚಂದ್ರ ಸ್ತಂ ಕಲಾಭಿ ರ್ನಿಷೇವತೇ ।
ನಾದತ್ತೇ ಕೇವಲಾಂ ಲೇಖಾಂ ಹರಚೂಡಾಮಣೀಕೃತಾಂ॥೩೪॥

ಪದ—(೧) ಸರ್ವಾಭಿಃ (೨) ಸರ್ವದಾ (೩) ಚಂದ್ರಃ (೪) ತಂ (೫) ಕಲಾಭಿಃ (೬) ನಿಷೇವತೇ (೭) ನ (೮) ಆದತ್ತೇ (೯) ಕೇವಲಾಂ (೧೦) ಲೇಖಾಂ (೧೧) ಹರಚೂಡಾಮಣೀಕೃತಾಂ.

ಶಬ್ದ—(೧, ೫) ಆ, ಸ್ತ್ರೀ, ತೃ, ಬ (೨, ೭) ಅವ್ಯ (೩) ಅ, ಪು, ಪ್ರ, ಏ (೪) ದ, ಪು, ದ್ವಿ, ಏ (೬, ೮) ಕ್ರಿ, (೯, ೧೦, ೧೧) ಆ, ಸ್ತ್ರೀ, ದ್ವಿ, ಏ.

ಅನ್ವಯ—ಚಂದ್ರಃ ಸರ್ವಾಭಿಃ ಕಲಾಭಿಃ ತಂ ಸರ್ವದಾನಿಷೇವತೇ, ಕೇವಲಾಂ ಹರಚೂಡಾಮಣೀಕೃತಾಂ ಲೇಖಾಂ ನ ಆದತ್ತೇ.

ಅರ್ಥ—ಚಂದ್ರಃ-ಚಂದ್ರನು, ಸರ್ವಾಭಿಃ-ಸಮಸ್ತಗಳಾದ, ಕಲಾಭಿಃ-ಕಳೆಗಳಿಂದಲೂ, ತಂ-ಆತಾರಕನನ್ನು, ಸರ್ವದಾ - ಯಾವಾಗಲೂ, ನಿಷೇವತೇ- ಸೇವಿಸುತ್ತಾನೆ, ಕೇವಲಾಂ - ಮುಖ್ಯವಾದ, (ಒಂದಾದ) ಹರ- ಈಶ್ವರನ, ಚೂಡಾಮಣೀಕೃತಾಂ-ಶಿರೋರತ್ನವಾದ, ಲೇಖಾಂ- ರೇಖೆಯನ್ನು, ನಾದತ್ತೇ- ಸ್ವೀಕರಿಸುವುದಿಲ್ಲ.

ತಾತ್ಪರ್ಯ॥ ಚಂದ್ರನು ಈಶ್ವರನ ಶಿರೋಭೂಷಣವಾದ ರೇಖೆಯನ್ನು ಮಾತ್ರವೇ ಧರಿಸದೆ ಶುಕ್ಲಕೃಷ್ಣಪಕ್ಷಗಳೆರಡರಲ್ಲಿಯೂ ತನಗಿರುವ ಸಂಪೂರ್ಣಕಳೆಗಳಿಂದಲೂ (೧೬) ಯಾವಾಗಲೂ ಆ ತಾರಕನ ಸೇವೆಯನ್ನು ಮಾಡುತ್ತಿರುವನು

ಆಕಾಂಕ್ಷೆ— ನಾದತ್ತೇ, ಕಃ ? ಚಂದ್ರಃ, ಕಾಂ ? ರೇಖಾಂ (ಸ ಪ್ರ. ) ಕಥಂಭೂತಾಂರೇಖಾಂ ? ಹರಚೂಡಾಮಣೀಕೃತಾಂ, ಪುನಃಕಥಂಭೂತಾಂರೇಖಾಂ ? ಕೇವಲಾಂ. ನಿಷೇವತೇ, ಕಂ? ಚಂದ್ರಃ, ಕಂ ? ತಂ (ಸ. ಪ್ರ.) ಕದಾ ? ಸರ್ವದಾ, ಕಾಭಿಃ ? ಕಲಾಭಿಃ, ಕಥಂಭೂತಾಭಿಃಕಲಾಭಿಃ ? ಸರ್ವಾಭಿಃ.

ವಿಗ್ರಹ—(೧೧) ಚೂಡಾಯಾಃಮಣಿಃ, ಚೂಡಾಮಣಿಃ (ಷ. ತ) ಅಚೂಡಾಮಣಿಃಚೂಡಾಮಣಿಃಸಂಪದ್ಯಮಾನಾಕೃತಾ-ಚೂಡಾಮಣೀಕೃತಾ (ಕೃ. ವೃ) + ತಾಂ.

ಧಾತುರೂಪ—(೬) ನಿಷೇವತೇ, ನಿಷೇವೇತೇ, ನಿಷೇವಂತೇ
ನಿಷೇವಸೇ, ನಿಷೇವೇಥೇ, ನಿಷೇವಧ್ವೇ
ನಿಷೇವೇ ನಿಷೇವಾವಹೇ, ನಿಷೇವಾಮಹೇ

ಧಾತ್ವರ್ಥ—(ಷೇವೃ-ಸೇವನೇ) ಸೇವಿಸುವಿಕೆ, ಎಂಬರ್ಥವುಳ್ಳ, 'ಭ್ವಾದಿ' ಒಂದನೆಯ ಗಣದ ಆತ್ಮನೇಪದಿ (ಷೇವೃ) ಎಂಬ ಧಾತುವಿಗೆ 'ನಿ' ಎಂಬ ಉಪಸರ್ಗವು ಸೇರಿ, 'ಲಟ್' ಲಕಾರದ ವರ್ತಮಾನಕಾಲದ ಪ್ರಥಮಪುರುಷೈಕ ವಚನದಲ್ಲಿದೆ.

ಧಾತುರೂಪ—(೮) ಆದತ್ತೇ, ಆದದಾತೇ, ಆದದತೇ
ಆದತ್ಸೇ, ಆದದಾಥೇ, ಆದದ್ಧ್ವೇ,
ಆದದೇ, ಆದದ್ವಹೇ, ಆದದ್ಮಹೇ

ಧಾತ್ವರ್ಥ—(ಡುದಾಞ್-ದಾನೇ) ಕೊಡುವಿಕೆ, ಎಂಬರ್ಥವುಳ್ಳ 'ಜುಹೋತ್ಯಾದಿ' ಮೂರನೆಯಗಣದ ಉಭಯಪದಿ 'ಡುದಾಞ್' ಎಂಬ ಧಾತುವಿಗೆ 'ಆಙ್' ಎಂಬ ಉಪಸರ್ಗವುಸೇರಿ 'ಸ್ವೀಕರಿಸುವಿಕೆ' ಎಂಬ ರ್ಥವುಳ್ಳುದಾಗಿ, ಆತ್ಮನೇಪದದ 'ಲಟ್' ಲಕಾರದ ವರ್ತಮಾನಕಾಲದ ಪ್ರಥಮಪುರುಷೈಕವಚನರೂಪವಾಗಿದೆ.

ವಿಶೇಷ---(೩) ಆಹ್ಲಾದಕಾರ್ಥವಾದ 'ಚದಿ' ಎಂಬ ಧಾತುವಿಗೆ ' ' ಪ್ರತ್ಯಯವು ಸೇರಿದೆ 'ನುಮ್' ಎಂಬಾಗಮವು ಬಂದಿದೆ (ಕೃ, ವೃ) ಆಹ್ಲಾದಕರನೆಂದು ಅವಯವಾರ್ಥವು (೫) ಕಲಾ- ಅಂಶ, ಚಿತ್ರ ಮೊದಲಾದ ಕೆಲವು, ೪೦ ಕಾಷ್ಠಗಳು (ಕಾಲಪ್ರಮಾಣ,) ಚಂದ್ರನ ಹದಿನಾರನೆಯ ಭಾಗ, (೧-೧೬) ಇವು (ನಾನಾ) (೬) ಧಾತ್ವಾದಿಷಕಾರಕ್ಕೆ ಸಕಾರವೂ, ಪುನಃ, ಆ ಸಕಾರವು 'ನಿ' ಎಂಬುಪಸರ್ಗಕ್ಕೆ ಪರವಾಗಿರುವುದರಿಂದ ಷಕಾರಾದೇಶವೂ ಬಂದಿದೆ [ ೧೧ ] ನಿರ್ಣಯಿಸುವುದು, ಬಂದು. ಎಲ್ಲ, ಮುಖ್ಯ [ನಾನಾ] ಈ ಶ್ಲೋಕದಲ್ಲಿ ಚಂದ್ರನಿಗೆ ಸರ್ವದಾ ಸಂಪೂರ್ಣತ್ವವಿಲ್ಲದಿದ್ದರೂ, ಉಂಟಾದಂತೆ ವರ್ಣಿಸಿರುವುದರಿಂದ ಅಸಂಬಂಧೇ ಸಂಬಂಧಾತಿಶಯೋಕ್ತ್ಯಲಂಕಾರವು ॥೩೪॥

ಶ್ಲೋ॥ ವ್ಯಾವೃತ್ತಗತಿ ರುದ್ಯಾನೇ ಕುಸುಮಸ್ತೇಯಸಾಧ್ವಸಾತ್ ।
ನ ವಾತಿ ವಾಯು ಸ್ತತ್ಪಾರ್ಶ್ವೇ ತಾಲವೃಂತಾನಿಲಾಧಿಕಂ ॥೩೫॥

ಪದ---(೧)ವ್ಯಾವೃತ್ತಗತಿಃ (೨) ಉದ್ಯಾನೇ (೩) ಕುಸುಮಸ್ತೇಯಸಾಧ್ವಸಾತ್ (೪) ನ (೫) ವಾತಿ (೬) ವಾಯುಃ (೭) ತತ್ಪಾರ್ಶ್ವೇ (೮) ತಾಲವೃಂತಾನಿಲಾಧಿಕಂ.

ಶಬ್ದ—(೧) ಇ, ಪು, ಪ್ರ, ಏ (೨, ೭) ಅ, ನ, ಸ, ಏ (೩) ಆ, ನ, ಪಂ, ಏ (೪, ೮) ಅವ್ಯ. (೫) ಕ್ರಿ. (೬) ಉ, ಪು, ಪ್ರ, ಏ।

ಅನ್ವಯ—ವಾಯುಃ ಕುಸುಮಸ್ತೇಯಸಾಧ್ವಸಾತ್ ಉದ್ಯಾನೇ ವ್ಯಾವೃತ್ತಗತಿಸ್ಸನ್, ತತ್ಪಾರ್ಶ್ವೇ ತಾಲವೃಂತಾನಿಲಾಧಿಕಂನವಾತಿ.

ಅರ್ಥ—ವಾಯುಃ-ವಾಯುವು, ಕುಸುಮ- ಹೂಗಳ, ಸ್ತೇಯ-ಅಪಹಾರದಿಂದುಂಟಾದ, ಸಾಧ್ವಸಾತ್-ಭಯದ ದೆಸೆಯಿಂದ, ಉದ್ಯಾನೇ-ಉಪವನದಲ್ಲಿ, ವ್ಯಾವೃತ್ತ-ಬಿಡಲ್ಪಟ್ಟ, ಗತಿಸ್ಸನ್-ಸಂಚಾರವುಳ್ಳವನಾಗಿ, ತತ್-ಆ ಉದ್ಯಾನದ, ಪಾರ್ಶ್ವೇ-ಸಮೀಪದಲ್ಲಿ, ತಾಲವೃಂತ - ಬೀಸಣಿಗೆಯಿಂದ ಹುಟ್ಟುವ, ಅನಿಲ-ವಾಯುವಿಗಿಂತ, ಅಧಿಕಂ-ಹೆಚ್ಚಾಗಿ, ನವಾತಿ-ಬೀಸುವುದಿಲ್ಲ.

ತಾತ್ಪರ್ಯ॥ ವಾಯುವು ಆ ತಾರಕನ ಶೃಂಗಾರವನದಲ್ಲಿ ತಾನು ಸಂಚರಿಸಿದಲ್ಲಿ ಆ ವನವೃಕ್ಷಲತೆಗಳಲ್ಲಿರುವ ಪುಷ್ಪಗಳು ಉದುರಿಹೋಗುವುದರಿಂದ ತನ್ನ ಮೇಲೆ ಹೂವಿನ ಕಳ್ಳತನವು ಬರುವದೆಂದೂ ಅಥವಾ ಹೂಗಳನ್ನುದುರಿಸಿದುದು ಅಪಕಾರವಾದುದರಿಂದ ದೈತ್ಯನಾಗ್ರಹಕ್ಕೆ ಪಾತ್ರನಾಗಿ ಶಿಕ್ಷೆಯನ್ನು ಹೊಂದಬೇಕಾಗುತ್ತೆಂದೂ ಬಹಳವಾಗಿ ಹೆದರಿ ಅವನ ಪುಷ್ಪವಾಟಿಕೆಗಳಲ್ಲಿ ನಿರಾತಂಕವಾಗಿ ಸುಳಿಯದೆ ಆ ತೋಟದ ಪಕ್ಕಗಳಲ್ಲಿ ಬೀಸಣಿಗೆಯಲ್ಲಿ ಬೀಸುವುದರಿಂದ ಹುಟ್ಟಿ ಚಲಿಸುವ ಮಂದವೇಗವುಳ್ಳ ವಾಯುವಿಗೆ ಸಮವಾದ ವೇಗವುಳ್ಳವನಾಗಿ ಬೀಸುವನಲ್ಲದೆ ಬಿರುಸಾಗಿ ಬೀಸದಿರುವನು.

ಆಕಾಂಕ್ಷೆ---ನವಾತಿ, ಕಃ ? ವಾಯುಃ (೨, ಪ್ರ) ಕಥಂ ? ತಾಲವೃಂತಾನಿಲಾಧಿಕಂ, ಕುತ್ರ ? ತತ್ಪಾರ್ಶ್ವೇ. ಕಥಂಭೂತಸ್ಸನ್ ? ವ್ಯಾವೃತ್ತಗತಿಸ್ಸನ್, ಕುತ್ರ ? ಉದ್ಯಾನೇ, ಕಸ್ಮಾತ್ - ಕುಸುಮಸ್ತೇಯಸಾಧ್ವಸಾತ್.

ವಿಗ್ರಹ---(೧) ವ್ಯಾವೃತ್ತಾ, ಗತಿಃ ಯಸ್ಯ ಸಃ - ವ್ಯಾವೃತ್ತಗತಿಃ

(ಷ, ಬ, ವ್ರೀ) (೩) ಕುಸುಮಾನಾಂ ಸ್ತೇಯಂ - ಕುಸುಮಸ್ತೇಯಂ. (ಷ, ತ) ಕುಸುಮಸ್ತೇಯಾತ್ ಸಾಧ್ವಸಂ-ಕುಸುಮಸ್ತೇಯಸಾಧ್ವಸಂ (ಪಂ. ತ) + ತಸ್ಮಾತ್ [೭] ತಸ್ಯಪಾರ್ಶ್ವಂ-ತತ್ಪಾರ್ಶ್ವಂ [ಷ, ತ] + ತಸ್ಮಿನ್ (V) ತಾಲಸ್ಯೇವವೃಂತಂಯಸ್ಯತತ್-ತಾಲವೃಂತಂ (ಷ, ಬ, ವ್ರೀ) ತಾಲವೃಂತಸ್ಯ ಅನಿಲಃ- ತಾಲವೃಂತಾನಿಲಃ [ಷ, ತ] ತಾಲವೃಂತಾನಿಲಾತ್ ಅಧಿಕಂ ಯಸ್ಮಿನ್ ಕರ್ಮಣಿತದ್ಯಥಾಭವತಿತಥಾ-ತಾಲವೃಂತಾನಿಲಾಧಿಕಂ [ಅವ್ಯ. ಭಾ]

ಧಾತುರೂಪ —(೫) ವಾತಿ, ವಾತಃ ವಾಂತಿ
ವಾಸಿ, ವಾಥಃ, ವಾಥ
ವಾಮಿ, ವಾವಃ, ವಾಮಃ

ಧಾತ್ವರ್ಥ---(ವಾ-ಗತಿಗಂಧನಯೋಃ) ಚಲಿಸುವಿಕೆ, ಸ್ಪರ್ಶಿಸುವಿಕೆ, ಎಂಬರ್ಥವುಳ್ಳ 'ಅದಾದಿ' ಎರಡನೆಯಗಣದ ಪರಸ್ಮೈಪದಿ 'ವಾ' ಎಂಬಧಾತುವು ಲಟ್ ಲಕಾರದ ವರ್ತಮಾನಕಾಲದ ಪ್ರಥಮಪುರುಷೈಕವಚನದಲ್ಲಿದೆ.

ವಿಶೇಷ---(೭) ಸ್ತೇನಸ್ಯಭಾವಃ ಸ್ತೇಯಂ [ತ. ವ್ಯ] ಸ್ತೇನ ಶಬ್ದಕ್ಕೆ ಭಾವಾರ್ಥದಲ್ಲಿ ಯತ್ಪ್ರತ್ಯಯವು ಸೇರಿ 'ನ'ಕಾರವು ಲೋಪವಾಗಿದೆ (೬) ಆಕಾರಾಂತಧಾತುವಾದುದರಿಂದ 'ವಾ' ಎಂಬುದಕ್ಕೆ 'ಯುಕ್' ಪ್ರತ್ಯಯವು ಸೇರಿದೆ (ಕೃ, ವ್ಯ) ||೩೫||

ಶ್ಲೋ|| ಪರ್ಯಾಯಸೇವಾ ಮುತ್ಸೃಜ್ಯ ಪುಷ್ಪಸಂಭಾರತತ್ಪರಾಃ ।
ಉದ್ಯಾನಪಾಲಸಾಮಾನ್ಯ ಮೃತವ ಸ್ತ ಮುಪಾಸತೇ ||೩೬||

ಪದ —(೧) ಪರ್ಯಾಯಸೇವಾಂ (೨) ಉತ್ಸೃಜ್ಯ (೩) ಪುಷ್ಪಸಂಭಾರತತ್ಪರಾಃ (೪) ಉದ್ಯಾನಪಾಲಸಾಮಾನ್ಯಂ (೫) ಋತವಃ (೬) ತಂ (೭) ಉಪಾಸತೇ

ಶಬ್ದ—(೧) ಆ, ಸ್ತ್ರೀ, ದ್ವಿ, ಏ ( , ೪) ಅವ್ಯ, (೩) ಅ, ಪು, ಪ್ರ, ಬ (೫) ಉ, ಪು, ಪ್ರ, ಬ (೬) ದ, ಪು, ದ್ವಿ, ಏ [೭] ಕ್ರಿ.

ಅನ್ವಯ—ಋತವಃ ಪರ್ಯಾಯಸೇವಾಂ ಉತ್ಸೃಜ್ಯ, ಪುಷ್ಪಸಂಭಾರತತ್ಪರಾಃ, ಉದ್ಯಾನಪಾಲಸಾಮಾನ್ಯಂ ತಂ ಉಪಾಸತೇ.

ಅರ್ಥ—ಋತವಃ - ವಸಂತಾದಿ ಆರು ಋತುಗಳು, ಪರ್ಯಾಯ-ಕ್ರಮವನ್ನನುಸರಿಸಿದ, (ಶರದಿ) ಸೇವಾಂ - ಸೇವೆಯನ್ನು, ಉತ್ಸೃಜ್ಯ-ಬಿಟ್ಟು, ಪುಷ್ಪ-ಹೂಗಳನ್ನು, ಸಂಭಾರ-ಕೂಡಿಡುವುದರಲ್ಲಿ, ತತ್ಪರಾಃ-ಆಸಕ್ತಗಳಾಗಿ, ಉದ್ಯಾನ-ತೋಟವನ್ನು, ಪಾಲ-ಕಾಯುವವರೊಡನೆ, ಸಾಮಾನ್ಯಂ-ಸಾಧಾರಣವಾಗಿ, ತಂ-ಆ ತಾರಕನನ್ನು, ಉಪಾಸತೇ-ಸೇವೆಮಾಡುತ್ತಲಿವೆ.

ತಾತ್ಪರ್ಯ॥ ಋತುಗಳು ತಾವು ಬರುವಕಾಲವನ್ನನುಸರಿಸಿ ಗಿಡಗಳಲ್ಲಿ ಬೇರೆಬೇರೆ ಜಾತಿಯ ಹೂಗಳ ಉತ್ಪತ್ತಿಯನ್ನು ಮಾಡಿಸುವದನ್ನು ಬಿಟ್ಟು, ಎಲ್ಲಜಾತಿಯ ಪುಷ್ಪಗಳೂ ಎಲ್ಲಕಾಲಗಳಲ್ಲಿಯೂ ಇಲ್ಲದೆ ಹೋದರೆ ತಮ್ಮಮೇಲೆ ತಪ್ಪುಬರುವುದೆಂಬ ಶಂಕೆಯಿಂದ, ಹೂಗಳನ್ನೊದಗಿಸುವುದೇ ತಮ್ಮ ಕೆಲಸವಾಗಿವುಳ್ಳ ಉದ್ಯಾನಪಾಲಕರಿಗೆ ಸಮಾನವಾಗಿ, ತಾವೂ ಸರ್ವದಾ ಸಕಲ ಪುಷ್ಪಸಂಗ್ರಹದಿಂದ ಆ ತಾರಕನನ್ನು ಸೇವಿಸುತ್ತಿರುವುವು. ಶೀತೋಷ್ಣಗಳ ವ್ಯತ್ಯಾಸದಿಂದ ಹೂಗಳು ಬಿಡಲಿಲ್ಲವೆಂಬುದು ಇಲ್ಲದಂತಿರುವುದು.

ಆಕಾಂಕ್ಷೆ—ಉಪಾಸತೇ, ಕೇ ? ಋತವಃ, ಕಂ ? (ಸ. ಪ್ರ) ಕಥಂ ? ಉದ್ಯಾನಪಾಲಸಾಮಾನ್ಯಂ, ಕಥಂಭೂತಾಸ್ಸಂತಃ ? ಪುಷ್ಪಸಂಭಾರತತ್ಪರಾಃ, ಕಿಂಕೃತ್ವಾ ? ಉತ್ಸೃಜ್ಯ, ಕಾಂ ? ಪರ್ಯಾಯಸೇವಾಂ.

ವಿಗ್ರಹ—(೧) ಪರ್ಯಾಯೇಣಸೇವಾ - ಪರ್ಯಾಯಸೇವಾ (ತೃ. ತ) + ತಾಂ. [೨] ಪುಷ್ಪಾಣಾಂಸಂಭಾರಃ - ಪುಷ್ಪಸಂಭಾರಃ (ಷ. ತ). ತಸ್ಮಿನ್ಪರಾಃ-ತತ್ಪರಾಃ [ಸ. ತ] ಪುಷ್ಪಸಂಭಾರೇತತ್ಪರಾಃ-ಪುಷ್ಪಸಂಭಾರತತ್ಪರಾಃ [ಸ. ತ] (೪) ಉದ್ಯಾನಸ್ಯಪಾಲಾಃ-ಉದ್ಯಾನಪಾಲಾಃ(ಷ.ತ) ಉದ್ಯಾನಪಾಲೈಃ ಸಾಮಾನ್ಯಂಯಥಾಭವತಿತಥಾ - ಉದ್ಯಾನಪಾಲಸಾಮಾನ್ಯಂ (ಅವ್ಯ. ಭಾ).

ಧಾತುರೂಪ.... (೭) ಉಪಾಸ್ತೇ, ಉಪಾಸಾತೇ, ಉಪಾಸತೇ.
ಉಪಾಸ್ಸೇ, ಉಪಾಸಾಥೇ, ಉಪಾಧ್ವೇ.
ಉಪಾಸೇ, ಉಪಾಸ್ವಹೇ, ಉಪಾಸ್ಮಹೇ:

ಧಾತ್ವರ್ಥ—[ಆಸ-ಉಪವೇಶನೇ] ಕೂತುಕೊಳ್ಳುವಿಕೆ ಎಂಬರ್ಥವುಳ್ಳ 'ಅದಾದಿ' ಎರಡನೆಯ ಗಣದ ಆತ್ಮನೇ ಪದಿ 'ಆಸ' ಎಂಬ ಧಾತುವಿಗೆ 'ಉಪ' ಎಂಬುಪಸರ್ಗವು ಸೇರಿ 'ಸೇವಿಸುವಿಕೆ' ಎಂಬರ್ಥವುಳ್ಳದ್ದಾಗಿ 'ಲಟ್' ಲಕಾರದ ವರ್ತಮಾನಕಾಲದ ಪ್ರಥಮಪುರುಷ ಬಹುವಚನರೂಪದಲ್ಲಿದೆ.

ವಿಶೇಷ---(೨) ಲ್ಯಬಂತಾವ್ಯಯವು (೩) ತತ್ಪರ, ಪ್ರಸಿತ, ಆಸಕ್ತ, ಇವು ಏಕಾರ್ಥಗಳು (೪) ಸಮಾನಸ್ಯಭಾವಃ - ಸಾಮಾನ್ಯಂ (ತಪ್ಯ) ಭಾವಾರ್ಥದಲ್ಲಿ ಯತ್ ಪ್ರತ್ಯಯವು ಬಂತು ಈ ಶ್ಲೋಕದಲ್ಲಿ ಷಡೃತುಗಳು ಉದ್ಯಾನಪಾಲಕರೊಡನೆ ತಾರಕನನ್ನು ಸೇವಿಸುತ್ತಿದ್ದುವು ಎಂಬ ವಾಕ್ಯಾರ್ಥವಿರುವುದರಿಂದ ಸಹೋಕ್ತ್ಯಲಂಕಾರವು ॥೩೬॥

ಶ್ಲೋ॥ ತಸ್ಯೋಪಾಯನಯೋಗ್ಯಾನಿ ರತ್ನಾನಿ ಸರಿತಾಂಪತಿಃ ।
ಕಥಮಪ್ಯಂಭಸಾಮಂತರಾನಿಷ್ಪತ್ತೇಃ ಪ್ರತೀಕ್ಷತೇ ॥೩೭॥

ಪದ---(೧) ತಸ್ಯ (೨) ಉಪಾಯನಯೋಗ್ಯಾನಿ (೩) ರತ್ನಾನಿ (೪) ಸರಿತಾಂ (೫) ಪತಿಃ (೬) ಕಥಂ (೭) ಅಪಿ (೮) ಅಂಭಸಾಂ (೯) ಅಂತಃ (೧೦) ಆನಿಷ್ಪತ್ತೇಃ (೧೧) ಪ್ರತೀಕ್ಷತೇ

ಶಬ್ದ—(೧) ದ, ಪು, ಷ, ಏ (೨,೩) ಅ, ನ, ದ್ವಿ, ಬ (೫) ಇ, ಪು, ಪ್ರ, ಏ (೬, ೭, ೯] ಅವ್ಯ (೮) ಸ, ನ, ಷ, ಬ (೧೦) ಇ, ಸ್ತ್ರೀ, ಪಂ, ಏ (೧೧) ಕ್ರಿ.

ಅನ್ವಯ---ಸರಿತಾಂಪತಿಃ ತಸ್ಯ ಉಪಾಯನಯೋಗ್ಯಾನಿ ರತ್ನಾನಿ ಅಂಭಸಾಂ ಅಂತಃ ಕಥಮಪಿ ಆನಿಷ್ಪತ್ತೇಃ ಪ್ರತೀಕ್ಷತೇ.

ಅರ್ಥ---ಸರಿತಾಂ - ನದಿಗಳ, ಪತಿಃ-ಒಡೆಯನಾದ ಸಮುದ್ರನು, ತಸ್ಯ-ಆ ತಾರಕನ, ಉಪಾಯನ-ಕಾಣಿಕೆಗೆ, ಯೋಗ್ಯಾನಿ-ಅರ್ಹಗಳಾದ, ರತ್ನಾನಿ-ರತ್ನಗಳನ್ನು, ಅಂಭಸಾಂ - ನೀರಿನ, ಅಂತಃ-ಒಳಗೆ, ಕಥಮಪಿ-ಹೇಗೊ, (ಮಹಾಪ್ರಯತ್ನ ಪೂರ್ವಕವಾಗಿ) ಆನಿಷ್ಪತ್ತೇಃ- ಸಿದ್ಧವಾಗುವವರೆಗೂ, ಪ್ರತೀಕ್ಷತೇ-ಕಾಯುತ್ತಾನೆ.

ತಾತ್ಪರ್ಯ — ಸಮುದ್ರರಾಜನು ತನ್ನಲ್ಲಿ ಉತ್ಪನ್ನವಾಗುವ ನವರತ್ನಗಳಲ್ಲಿ ಈ ತಾರಕನಿಗೆ ಕಾಣಿಕೆಯಾಗುವುದಕ್ಕೆ (ನಜರು) ಯೋಗ್ಯಗಳಾದ

ರತ್ನಗಳನ್ನುಮಾತ್ರ ಅವು ಪರಿಪಾಕವನ್ನು ಹೊಂದಿ ಸಿದ್ಧವಾಗುವವರೆಗೂ ಮಹಾಪ್ರಯತ್ನದಿಂದ ಬಹು ಜಾಗರೂಕನಾಗಿ ತನ್ನಲ್ಲಿ ಕಾದುಕೊಂಡಿರುವನು.

ಆಕಾಂಕ್ಷೆ:—ಪ್ರತೀಕ್ಷತೇ, ಕಃ ? ಪತಿಃ, ಕಾನಿ ? ರತ್ನಾನಿ, (ಸ೯ ಪ್ರ) ಕಸ್ಮಾತ್? ಆನಿಷ್ಪತ್ತೇಃ, ಕಥಂ? ಕಥಮಪಿ, ಕುತ್ರ ? ಅಂತಃ, ಕೇಷಾಂ? ಅಂಭಸಾಂ, ಕಥಂಭೂತಾನಿ ರತ್ನಾನಿ ? ಉಪಾಯನಯೋಗ್ಯಾನಿ, ಕಸ್ಯ? ತಸ್ಯ, ಕಾಸಾಂ? ಸರಿತಾಂ,

ವಿಗ್ರಹ:—(೨) ಉಪಾಯನಾನಾಂ ಯೋಗ್ಯಾ -ಉಪಾಯನಯೋಗ್ಯಾನಿ (ಷ,ತ) + ತಾನಿ, (೧೦)ನಿಷ್ಪತ್ತಿಮಭಿವ್ಯಾಪ್ಯ-ಆನಿಷ್ಪತ್ತಿಃ(ಪ್ರಾ, ಸ) + ತಸ್ಮಾತ್.

ಧಾತುರೂಪ:—(೧೧) ಪ್ರತೀಕ್ಷತೇ, ಪ್ರತೀಕ್ಷೇತೇ, ಪ್ರತೀಕ್ಷಂತೇ
ಪ್ರತೀಕ್ಷಸೇ, ಪ್ರತೀಕ್ಷೇಥೇ, ಪ್ರತೀಕ್ಷಧ್ವೇ
ಪ್ರತೀಕ್ಷೇ,ಪ್ರತೀಕ್ಷಾವಹೇ, ಪ್ರತೀಕ್ಷಾಮಹೇ

ಧಾತ್ವರ್ಥ—(ಈಕ್ಷ ದರ್ಶನೇ) ನೋಡುವಿಕೆ, ಎಂಬರ್ಥವುಳ್ಳ, ಭ್ವಾದಿ, ಒಂದನೆಯುಗಣದ ಆತ್ಮನೇಪದಿ 'ಈಕ್ಷ, ಎಂಬಧಾತುವಿಗೆ' ಪ್ರತಿ ಎಂಬುಪಸರ್ಗವುಸೇರಿ, ನಿರೀಕ್ಷಿಸುವಿಕೆ ಎಂಬರ್ಥವುಳ್ಳದ್ದಾಗಿ 'ಲಟ್, ಲಕಾರದ ವರ್ತಮಾನಕಾಲದ ಪ್ರಥಮಪುರುಷೈಕವಚನರೂಪದಲ್ಲಿದೆ.

ವಿಶೇಷ—(೨) ಉಪಾಯನ, ಪ್ರದೇಶನ, ಪ್ರಾಭೃತ,ಇವು ಏಕಾರ್ಥಕಗಳು (೧೨) 'ಆನಿಷ್ಪತ್ತಿ, ಎಂದು ವಿಕಲ್ಪದಿಂದ ಸಮಾಸವು ಅವ್ಯಯೀಭಾವವೂ ಆಗುವುದುಂಟು, ನಿರ್ + ಪದ್ + ತಿ, ನಿಷ್ಪದ್, ಎಂಬ ಧಾತುವಿಗೆ ಸ್ತ್ರೀಲಿಂಗದಲ್ಲಿಭಾವಾರ್ಥದಕ್ತಿನ್ ಪ್ರತ್ಯಯವು ಬಾದಿದೆ, ಆಙ್ ಎಂಬುವುದು (ಆ) ಮರ್ಯಾದಾರ್ಥಕವಾದ ಅವ್ಯಯವು ॥೩೭॥

ಶ್ಲೋ॥ ಜ್ವಲನ್ಮಣಿಶಿಖಾಶ್ಚೈನಂ ವಾಸುಕಿಪ್ರಮುಖಾ ನಿಶಿ ।
ಸ್ಥಿರಪ್ರದೀಪತಾಮೇತ್ಯ ಭುಜಂಗಾಃ ಪರ್ಯುಪಾಸತೇ॥೩೮॥

ಪದ—(೧) ಜ್ವಲನ್ಮಣಿಶಿಖಾಃ (೨) ಚ (೪) ಏನಂ (೪) ವಾಸುಕಿಪ್ರಮುಖಾಃ (೫) ನಿಶಿ, (೬) ಸ್ಥಿರಪ್ರದೀಪತಾಂ (೭) ಏತ್ಯ(೮) ಭುಜಂಗಾಃ (೯) ಪರ್ಯುಪಾಸತೇ.

ಶಬ್ದ—(೧, ೪, ೮) ಅ, ಪು, ಪ್ರ, ಬ (೨, ೭) ಅವ್ಯ, (೩) ದ,ಪು ದ್ವಿ, ಏ (೫) ಶ, ಸ್ತ್ರೀ, ಸ, ಏ (೬) ಆ, ಸ್ತ್ರೀ, ದ್ವಿ, ಏ (೯) ಕ್ರಿ.

ಅನ್ವಯ—ಚ, ಜ್ವಲನ್ಮಣಿಶಿಖಾಃ ವಾಸುಕಿಪ್ರಮುಖಾಃ ಭುಜಂಗಾಃ ನಿಶಿ ಸ್ಥಿರಪ್ರದೀಪತಾಂ ಏತ್ಯ ಏನಂ ಪರ್ಯುಪಾಸತೇ.

ಅರ್ಥ--ಚ-ಮತ್ತು, ಜ್ವಲತ್- ಪ್ರಜ್ವಲಿಸುತ್ತಿರುವ, ಮಣಿ-ಶಿರೋಮಣಿಗಳ,ಶಿಖಾಃ-ಜ್ವಾಲೆಗಳುಳ್ಳ, ವಾಸುಕಿ-ವಾಸುಕಿಯೇ, ಪ್ರಮುಖಾಃ-ಮೊದಲಾದ, ಭುಜಂಗಾಃ-ಸರ್ಪಗಳು, ನಿಶಿ-ರಾತ್ರಿಯಲ್ಲಿ. ಸ್ಥಿರ-ನಾಶವಿಲ್ಲದ, ಪ್ರದೀಪತಾಂ-ದೊಡ್ಡದೀಪದ ರೀತಿಯನ್ನು, ಏತ್ಯ-ಹೊಂದಿ, ಏನಂ-ಈ ತಾರಕನನ್ನು, ಪರ್ಯುಪಾಸತೇ-ಸೇವಿಸುತ್ತಿರುವುವು.

ತಾತ್ಪರ್ಯ---ವಾಸುಕಿ ಮೊದಲಾದ ಸರ್ಪಶ್ರೇಷ್ಠಗಳು ತಮ್ಮ ತಲೆಯಲ್ಲಿ ಥಳಥಳಿಸುತ್ತಿರುವರತ್ನಗಳ ಕಾಂತಿಗಳಿಂದ ಎಂದಿಗೂ ಗಾಳಿಯಿಂದ, ಅಥವಾ ತೈಲಾಭಾವದಿಂದ ಆರದ ದೀಪಗಳಂತಿದ್ದು, ಅವನನ್ನು ಸರ್ವದಾ ಸೇವಿಸುತ್ತಿರುವುವು.

ಆಕಾಂಕ್ಷೆ---ಪರ್ಯುಪಾಸತೇ, ಕೇ? ಭುಜಂಗಾಃ, ಕಂ ? ಏನಂ (ಸಪ್ರ) ಕಿಂಕೃತ್ವಾ? ಏತ್ಯ, ಕಾಂ? ಸ್ಥಿರಪ್ರದೀಪತಾಂ, ಕದಾ? ನಿಶಿ, ಕಥಂಭೂತಾಃ ಭುಜಂಗಾಃ? ವಾಸುಕಿಪ್ರಮುಖಾಃ, ಪುನಃಕಥಂಭೂತಾಃ ಭುಜಂಗಾಃ? ಜ್ವಲನ್ಮಣಿಶಿಖಾಃ, ಕಿಂ? ಚ:

ವಿಗ್ರಹ:—(೧) ಜ್ವಲಂತಃ ಮಣಯಃ-ಜ್ವಲನ್ಮಣಯಃ (ವಿ, ಪೂರ್ವ, ಕ) ಜ್ವಲನ್ಮಣೀನಾಂ ಶಿಖಾಯೇಷಾಂತೇ-ಜ್ವಲನ್ಮಣಿಶಿಖಾಃ (ಷ ಬ, ವ್ರೀ) (೪) ವಾಸುಕಿಃ-ಪ್ರಮುಖಂಯೇಷಾಂತೇ ವಾಸುಕಿಪ್ರಮುಖಾಃ (ಷ, ಬ, ವ್ರೀ) (೬) ಸ್ಥಿರಶ್ಚಾಸೌಪ್ರದೀಪಶ್ಚ - ಸ್ಥಿರಪ್ರದೀಪಃ (ವಿ. ಪೂರ್ವ,ಕ) ಸ್ಥಿರಪ್ರದೀಪಸ್ಯಭಾವಃ-ಸ್ಥಿರಪ್ರದೀಪತಾ (ತ, ವೃ) + ತಾಂ,

ಧಾತುರೂಪ—(೯) ಪರ್ಯುಪಾಸ್ತೇ, ಪರ್ಯುಪಾಸಾತೇ, ಪರ್ಯುಪಾಸತೇ
ಪರ್ಯುಪಾಸ್ಸೇ, ಪರ್ಯುಪಾಸಾಥೇ, ಪರ್ಯುಪಾಧ್ವೇ
ಪರ್ಯುಪಾಸೇ, ಪರ್ಯುಪಾಸ್ವಹೇ, ಪರ್ಯುಪಾಸ್ಮಹೇ

ಧಾತ್ವರ್ಥ---(ಆಸ-ಉಪವೇಶನೇ)ಕುಳಿತುಕೊಳ್ಳುವಿಕೆ, ಎಂಬರ್ಥ

ವುಳ್ಳ ಅದಾದಿ, ಎರಡನೆಯ ಗಣದ ಆಸ, ಎಂಬಧಾತುವಿಗೆ ಪರಿ, ಉಪ ಎಂಬ ಉಪಸರ್ಗಗಳುಸೇರಿ, ಸೇವಿಸುವಿಕೆ ಎಂಬರ್ಥವುಳ್ಳುದಾಗಿ, ಆತ್ಮನೇ ಪದದಲಟ್ ಲಕಾರದ, ವರ್ತಮಾನಕಾಲದ ಪ್ರಥಮಪುರುಷ ಬಹು ವಚನರೂಪವಾಗಿದೆ.

• ವಿಶೇಷ!---(೭) ಇಣ್, ಎಂಬ ಧಾತುವಿಗೆ ಲ್ಯಪ್ ಪ್ರತ್ಯಯವುಪ ರವಾಗಿ (ಇ + ಯ) ಪಕಾರವು ಲೋಪವಾಗುವ ಲ್ಯಪ್, ಪ್ರತ್ಯಯವುಪ ರವಾದುದರಿಂದ ಧಾತುವಿನ ಇಕಾರಕ್ಕೆ ಗುಣವೂ, ಧಾತುಪ್ರತ್ಯಯಗಳಗೆ ನಡುವೆ ತುಕ್, (ತ್) ಎಂಬಾಗಮವೂ ಬಂದಿದೆ, (೮) ಸರ್ಪ, ಸಿದ್ಧರು, ವಿಟ, ಇವು ನಾನಾರ್ಥಗಳು. ಭುಜಂಗಶಬ್ದವನ್ನು ಪ್ರಯೋಗಿಸಿರುವು ದರಿಂದ ಇಲ್ಲಿ ಸಿದ್ಧರೂ ಸೇವಿಸುತ್ತಾರೆಂದು ಧ್ವನಿತೋರುವುದು, ಈ ಶ್ಲೋಕದಲ್ಲಿ ಸ್ಥಿರಪ್ರದೀಪವೆಂಬ ಉಪಮಾನವಸ್ತುವನ್ನಾಗಿ ಜ್ವಲನ್ಮಣಿಶಿಖೆ, ಎಂಬ ಉಪಮೇಯವಸ್ತುವನ್ನು (ಪರಿಣಾಮಮಾಡುವುದರಿಂದ) ಬದಲಾಯಿಸೋಣದರಿಂದ ಉಪಮಾನವಸ್ತುವಿನಿಂದಾಗ ಬೇಕಾದ ಬೆಳಗುವಿಕೆ ಎಂಬ ಕ್ರಿಯೆಗೆ ಉಪಯೋಗವಾಗುವುದರಿಂದ ಪರಿಣಾಮಾಲಂಕಾರವು ॥೩೮॥

ಶ್ಲೋ ॥ ತತ್ಕೃತಾನುಗ್ರಹಾಪೇಕ್ಷೀ ತಂ ಮುಹು ರ್ದೂತಹಾರಿತೈಃ ।
ಅನುಕೂಲಯತೀಂದ್ರೋಽಪಿ ಕಲ್ಪದ್ರುಮವಿಭೂಷಣೈಃ॥ (೩೯)

ಪದ;—(೧) ತತ್ಕೃತಾನುಗ್ರಹಾಪೇಕ್ಷೀ (೨) ತಂ (೩) ಮುಹುಃ (೪) ದೂತಹಾರಿತೈಃ (೫) ಅನುಕೂಲಯತಿ (೬) ಇಂದ್ರಃ (೭) ಅಪಿ(೮) ಕಲ್ಪದ್ರುಮವಿಭೂಷಣೈಃ

ಶಬ್ದ---(೧) ನ, ಪು, ಪ್ರ, ಏ (೨) ದ, ಪು, ದ್ವಿ, ಏ (೩, ೭) ಅವ್ಯ (೪, ೮) ಅ, ನ, ತೃ, ಬ (೫) ಕ್ರಿ. (೬) ಅ, ಪು, ಪ್ರ, ಏ.

ಅನ್ವಯ --- ಇಂದ್ರೋಽಪಿ ತತ್ಕೃತಾನುಗ್ರಹಾಪೇಕ್ಷೀಸನ್ ತಂ ಮುಹುಃದೂತಹಾರಿತೈಃ ಕಲ್ಪದ್ರುಮ ವಿಭೂಷಣೈಃ ಅನುಕೂಲಯತಿ

ಅರ್ಥ---ಇಂದ್ರೋಽಪಿ-ಇಂದ್ರನೂ ಕೂಡ, ತತ್ - ಆ ತಾರಕನಿಂದ, ಕೃತ-ಮಾಡಲ್ಪಟ್ಟ, ಅನುಗ್ರಹ-ಪ್ರಸಾದವನ್ನು, ಅಪೇಕ್ಷೀ-ಅಪೇಕ್ಷಿಸುವವನಾಗಿ, ತಂ-ಅವನನ್ನು, ಮುಹುಃ-ಆಗಾಗ್ಗ, ದೂತ-ಸೇವಕರಿಂದ,

ಹಾರಿತೈಃ-ಕಳುಹಿಸಲ್ಪಟ್ಟ, ಕಲ್ಪದ್ರುಮ-ಕಲ್ಪವೃಕ್ಷಗಳ, ವಿಭೂಷಣೈಃ-ಅಲಂಕಾರಗಳಿಂದ, (ಹೂಗಳಿಂದ) ಅನುಕೂಲಯತಿ - ತನಗೆ ಅನುಕೂಲನನ್ನಾಗಿ ಮಾಡಿಕೊಳ್ಳುವನು

ತಾತ್ಪರ್ಯ---ಇಂದ್ರನು ಆ ತಾರಕನ ಅನುಗ್ರಹವನ್ನು ಹೇಗಾದರೂ ಸಂಪಾದಿಸಬೇಕೆಂದು ನೆನೆದು ತನ್ನ ಸೇವಕರ ಮೂಲಕವಾಗಿ ಅಡಿಗಡಿಗೆ ತನ್ನ ಉದ್ಯಾನದಲ್ಲಿರುವ ಕಲ್ಪವೃಕ್ಷಗಳ ಅಮೋಘವಾದ ಪುಷ್ಪಗಳ ಸರವನ್ನು ಕಾಣಿಕೆಯಾಗಿ ಅರ್ಪಿಸುತ್ತಾ ಅವನನ್ನು ಒಲಿಸಿಕೊಳ್ಳುವನು.

ಆಕಾಂಕ್ಷೆ---ಅನುಕೂಲಯತಿ, ಕಃ ? ಇಂದ್ರಃ, ಕಂ ? ತಂ (ಸ, ಪ್ರ) ಕೈಃ ? ಕಲ್ಪದ್ರುಮವಿಭೂಷಣೈಃ, ಕಥಂಭೂತೈಃ ಕಲ್ಪದ್ರುಮವಿಭೂಷಣೈಃ ? ದೂತಹಾರಿತೈಃ, ಕದಾ ? ಮುಹುಃ, ಕಥಂಭೂತಸ್ಸಃ ? ತತ್ಕೃತಾನುಗ್ರಹಾಪೇಕ್ಷೀಸನ್

ವಿಗ್ರಹ---(೧) ತೇನಕೃತಃ-ತತ್ಕೃತಃ (ತೃ, ತ) ತತ್ಕೃತಶ್ಚಾಸೌ ಅನುಗ್ರಹಶ್ಚ ತತ್ಕೃತಾನುಗ್ರಹಃ (ವಿ, ಪೂರ್ವ, ಕ) ಅಪೇಕ್ಷಾ ಅಸ್ಯಾಸ್ತೀತಿ ಅಪೇಕ್ಷೀ (ಕ, ವೃ) ತತ್ಕೃತಾನುಗ್ರಹೇ ಅಪೇಕ್ಷೀ-ತತ್ಕೃತಾನುಗ್ರಹಾಪೇಕ್ಷೀ (ಸ, ತ) [೪] ದೂತೈಃಹಾರಿತಾನಿ-ದೂತಹಾರಿತಾನಿ (ತೃ, ತ) + ತೈಃ (೮) ಕಲ್ಪಇತಿ ದ್ರುಮಾಃ - ಕಲ್ಪದ್ರುಮಾಃ (ಸಂ, ಪೂರ್ವ, ಕ) ಕಲ್ಪದ್ರುಮಾಣಾಂ ವಿಭೂಷಣಾನಿ-ಕಲ್ಪದ್ರುಮವಿಭೂಷಣಾನಿ (ಷ, ತ) + ತೈಃ.

ಧಾ॥ರೂಪ[೫] ಅನುಕೂಲಯತಿ, ಅನುಕೂಲಯತಃ ಅನುಕೂಲಯಂತಿ
ಅನುಕೂಲಯಸಿ, ಅನುಕೂಲಯಥಃ ಅನುಕೂಲಯಥ,
ಅನುಕೂಲಯಾಮಿ ಅನುಕೂಲಯಾವ ಅನುಕೂಲಯಾಮಃ

ಧಾತ್ವರ್ಥ---ಪ್ರಾತಿಪದಿಕವಾದ ಅನುಕೂಲ, ಎಂಬ ಶಬ್ದದಮೇಲೆ ಧಾತ್ವರ್ಥದಲ್ಲಿ 'ಣಿಚ್' ಎಂಬ (ಇ) ಪ್ರತ್ಯಯವು ಸೇರಿ, ಸನಾದ್ಯಂತವಾದ ಅನುಕೂಲಯ, ಎಂಬಧಾತುವಾಗಿ ಪರಸ್ಮೈಪದದ ಲಟ್ ಲಕಾರದ ವರ್ತಮಾನಕಾಲದ ಪ್ರಥಮಪುರುಷೈಕವಚನರೂಪದಲ್ಲಿದೆ

ವಿಶೇಷ---[೧] ಣಿನಿಪ್ರತ್ಯಯಾಂತವು [೨] ತಂ, ಮುಹುಃ, ಎಂಬು

ದಕ್ಕೆ 'ಪ್ರತ್ಯಹಂ' ಎಂಬ ಪಾಠಾಂತರವು [೪] ಕಲ್ಪವೃಕ್ಷಸಂಬಂಧಿಯಾದ ಅಲಂಕಾರವೆಂದು ಅರ್ಥವಾದುದರಿಂದ ಹೂಗಳೆಂದು ತಾತ್ಪರ್ಯವು॥

ಶ್ಲೋ॥ ಇತ್ಥಮಾರಾಧ್ಯಮಾನೋಽಪಿ ಕ್ಲಿಶ್ನಾತಿ ಭುವನತ್ರಯಂ ।
ಶಾಮ್ಯೇತ್ಪ್ರತ್ಯಪಕಾರೇಣ ನೋಪಕಾರೇಣ ದುರ್ಜನಃ ॥೪೦॥

ಪದ:—(೧) ಇತ್ಥಂ (೨) ಆರಾಧ್ಯಮಾನಃ (೩) ಅಪಿ (೪) ಕ್ಲಿಶ್ನಾತಿ (೫) ಭುವನತ್ರಯಂ (೬) ಶಾಮ್ಯೇತ್ (೭) ಪ್ರತ್ಯಪಕಾರೇಣ (೮) ನ (೯) ಉಪಕಾರೇಣ (೧೦) ದುರ್ಜನಃ.

ಶಬ್ದ—(೧, ೩, ೮) ಅವ್ಯ (೨, ೧೦) ಅ, ಪು, ಪ್ರ, ಏ (೪, ೬) ಕ್ರಿ (೫) ಅ, ನ, ದ್ವಿ, ಏ (೭, ೯) ಅ, ಪು, ತೃ ಏ.

ಅನ್ವಯ—ಇತ್ಥಂ (ಸಃ), ಆರಾಧ್ಯಮಾನೋಽಪಿ, ಭುವನತ್ರಯಂ ಕ್ಲಿಶ್ನಾತಿ, ದುರ್ಜನಃ ಪ್ರತ್ಯಪಕಾರೇಣ ಶಾಮ್ಯೇತ್, ಉಪಕಾರೇಣ ನ-

ಅರ್ಥ—ಇತ್ಥಂ-ಈಪ್ರಕಾರವಾಗಿ, ಸಃ-ಆ ತಾರಕನು, ಆರಾಧ್ಯಮಾನೋಽಪಿ, -ಸೇವಿಸಲ್ಪಡುತ್ತಿರುವನಾದರೂ, ಭುವನತ್ರಯಂ-ಮೂರು ಲೋಕವನ್ನೂ, ಕ್ಲಿಶ್ನಾತಿ-ದುಃಖಪಡಿಸುತ್ತಾನೆ, ದುರ್ಜನಃ-ದುಷ್ಟನು, ಪ್ರತ್ಯಪಕಾರೇಣ-ತನ್ನ ಅಪಕಾರಕ್ಕೆ ಪ್ರತೀಕಾರಮಾಡುವುದರಿಂದ, ಶಾಮ್ಯೇತ್-ಶಾಂತನಾಗುವನು, ಉಪಕಾರೇಣ-ಉಪಕಾರ ಮಾಡುವುದರಿಂದ, ನ-ಶಾಂತನಾಗುವುದಿಲ್ಲ.

ತಾತ್ಪರ್ಯ— ಹೀಗೆ ಆ ತಾರಕನನ್ನು ಸಮಸ್ತದೇವತೆಗಳೂ, ಭುಜಗರೂ, ಇಂದ್ರನೇ ಮೊದಲಾದವರೂ ಸೇವೆಮಾಡಿಕೊಂಡಿದ್ದರೂ ಅವನು ಸಮಾಧಾನ ಚಿತ್ತನಾಗದೆ ಲೋಕವನ್ನು ಬಾಧಿಸುತ್ತಿರುವನು, ಅದು ನ್ಯಾಯವೇ ಸರಿ, ದುಷ್ಟನ ಅಪಕಾರಕ್ಕೆ ತಕ್ಕಂತೆ ಪ್ರತಿಯಾಗಿ ಅವನನನ್ನು ದಂಡಿಸಿದರೆ ಅವನು ಶಾಂತನಾಗುವನಲ್ಲದೆ ಅವನಿಗೆ ಉಪಕಾರವನ್ನೇ ಮಾಡುತ್ತಾ ಬಂದರೆ ಶಾಂತನಾಗುವುದಿಲ್ಲ, ಮತ್ತೂ ಕೋಪವನ್ನು ಹೊಂದುವನು

ಆಕಾಂಕ್ಷೆ—ನ, ಕೇನ? ಉಪಕಾರೇಣ, ಶ್ಯಾಮ್ಯೇತ್, ಕಃ? ದುರ್ಜನಃ (ಅ, ಪ್ರ) ಕೇನ? ಪ್ರತ್ಯಪಕಾರೇಣ, ಕ್ಲಿಶ್ನಾತಿ, ಕಃ?(ಸಃ), ಕಿಂ? ಭುವನತ್ರಯಂ (ಸ, ಪ್ರ) ಕಥಂಭೂತೋಽಪಿ ? ಆರಾಧ್ಯಮಾನೋಽಪಿ, ಕಥಂ? ಇತ್ಥಂ.

ವಿಗ್ರಹ—(೫) ಭುವನಾನಾಂತ್ರಯಂ-ಭುವನತ್ರಯಂ(ಷ,ತ)ತತ್

ಧಾತುರೂಪ---(೪) ಕ್ಲಿಶ್ನಾತಿ, ಕ್ಲಿಶ್ನೀತಃ, ಕ್ಲಿಶ್ನಂತಿ
ಕ್ಲಿಶ್ನಾಸಿ, ಕ್ಲಿಶ್ನೀಥಃ, ಕ್ಲಿಶ್ನೀಥ
ಕ್ಲಿಶ್ನಾಮಿ, ಕ್ಲಿಶ್ನೀವಃ, ಕ್ಲಿಶ್ನೀಮಃ

ಧಾತ್ವರ್ಥ---(ಕ್ಲಿಶೂ-ವಿಬಾಧನೇ) ಬಾಧೆಪಡಿಸುವಿಕೆ, ಎಂಬರ್ಥ ವುಳ್ಳ ಕ್ರ್ಯಾದಿ, ಒಂಭತ್ತನೆಯ ಗಣದ ಕ್ಲಿಶೂ, ಎಂಬ ಧಾತುವು ಲಟ್ ಲಕಾರದ ವರ ಮಾನಕಾಲದ ಪ್ರಥಮಪುರುಷೈಕವಚನರೂಪದಲ್ಲಿದೆ.

ಧಾತುರೂಪ---ಶಾಮ್ಯೇತ್, ಶಾಮ್ಯೇತಾಂ, ಶಾಮ್ಯೇಯುಃ,
ಶಾಮ್ಯೇಃ. ಶಾಮ್ಯೇತಂ, ಶಾಮ್ಯೇತ,
ಶಾಮ್ಯೇಯಂ, ಶಾಮ್ಯೇವ, ಶಾಮ್ಯೇಮ.

ಧಾತ್ವರ್ಥ--- [ಶಮು-ಉಪಶಮೇ] ಶಾಂತಿಗೊಳ್ಳುವಿಕೆ, ಎಂಬರ್ಥ ವುಳ್ಳ ದಿವಾದಿ ೪ನೆಯಗಣದ ಪರಸ್ಮೈಪದಿ,ಶಮು, ಎಂಬ ಧಾತುವು ವಿಧ್ಯ ರ್ಥದ ಲಙ್, ಲಕಾರದ ಪ್ರಥಮಪುರುಷೈಕವಚನರೂಪದಲ್ಲಿದೆ.

ವಿಶೇಷ--- (೧) ಇದಮ್, ಶಬ್ದದಮೇಲೆ ಪ್ರಕಾರಾರ್ಥದಲ್ಲಿ ಥ ಮು, ಪ್ರತ್ಯಯವು ಬಂದಿದೆ, (೨) ಕರ್ಮಾರ್ಥದಲ್ಲಿ 'ಶಾನಚ್, ಪ್ರತ್ಯಯ ವೂ, ಮುಮ್, ಎಂಬಾಗಮವೂ ಬಂದಿದೆ, ಈ ಶ್ಲೋಕದಲ್ಲಿ ತಾರ ಕನು ತನಗೆ ಎಷ್ಟು ಉಪಕಾರಮಾಡಿದರೂ ಪ್ರತಿಯಾಗಿ ಅಪಕಾರವನ್ನೇ ಮಾಡುತ್ತಿದ್ದನು,ಎಂಬ ವಿಶೇಷವಾಕ್ಯಾರ್ಥವನ್ನು,ದುರ್ಜನರು ಉಪಕಾ ರಕ್ಕೆ ಶಾಂತರಾಗುವುದಿಲ್ಲ,ಮತ್ತಷ್ಟು ಕೋಪಿಸಿಕೊಂಡು ಅಪಕಾರವನ್ನು ಹೆಚ್ಚು ಮಾಡತೊಡಗುವರು, ಎಂಬ ಸಾಮಾನ್ಯವಾಕ್ಯದಿಂದ ಸಮರ್ಥನೆ ಮಾಡಿರುವುದರಿಂದ ಸಾಮಾನ್ಯೇನವಿಶೇಷಸಮರ್ಥನರೂಪವಾದ ಅರ್ಥಾಂ ತರನ್ಯಾಸಾಲಂಕಾರವು. ॥೪೦॥

ಶ್ಲೋ॥ ತೇನಾ ಮರವಧೂಹಸ್ತೈಃ ಸದಯಾಲೂನಪಲ್ಲವಾಃ ।
ಅಭಿಜ್ಞಾಃ ಚ್ಛೇದಪಾತಾನಾಂ ಕ್ರಿಯಂತೇ ನಂದನದ್ರುಮಾಃ ॥೪೧॥

ಪದ---(೧) ತೇನ, (೨) ಅಮರವಧೂಹಸ್ತೈಃ (೩) ಸದಯಾಲೂ ನಪಲ್ಲವಾಃ (೪) ಅಭಿಜ್ಞಾಃ (೫) ಛೇದಪಾತಾನಾಂ (೬) ಕ್ರಿಯಂತೇ (೭) ನಂದನದ್ರುಮಾಃ.

ಶಬ್ದ:---(೧) ದ, ಪು, ತೃ, ಏ (೨) ಅ, ಪು, ತೃ, ಬ (೩ ೪,೭,) ಅ, ಪು, ಪ್ರ, ಬ, (೫) ಅ, ಪು, ಷ, ಬ, (೬) ಕ್ರಿ.

ಅನ್ವಯ:—ತೇನ,ಅಮರವಧೂಹಸ್ತೈಃ ಸದಯಾಲೂನಪಲ್ಲವಾಃ ನಂದನದ್ರುಮಾಃ, ಛೇದಪಾತಾನಾಂ ಅಭಿಜ್ಞಾಃ ಕ್ರಿಯಂತೇ.

• ಅರ್ಥ:—ತೇನ-ಆ ತಾರಕನಿಂದ, ಅಮರ-ದೇವತೆಗಳ, ವಧೂ-ಸ್ತ್ರೀಯರ, ಹಸ್ತೈಃ-ಹಸ್ತಗಳಿಂದ, ಸದಯ-ದಯೆಯೊಡನೆ, ಆಲೂನ-ಕೊಯ್ಯಲ್ಪಡದಿರುವ, ಪಲ್ಲವಾಃ-ಚಿಗುರುಗಳುಳ್ಳ, ನಂದನ-ಇಂದ್ರನಉದ್ಯಾನದಲ್ಲಿನ, ದ್ರುಮಾಃ-ವೃಕ್ಷಗಳು, ಛೇದ - ಕತ್ತರಿಸುವಿಕೆಯೇನು, ಪಾತಾನಾಂ-ಬೀಳುವಿಕೆಯೇನು ಇವುಗಳನ್ನು, ಅಭಿಜ್ಞಾಃ-ತಿಳಿದವುಗಳು, ಕ್ರಿಯಂತೇ-ಮಾಡಲ್ಪಡುತ್ತವೆ.

ತಾತ್ಪರ್ಯ—ದೇವಸ್ತ್ರೀಯರೂ ಸಹ ದಯಾಪೂರ್ವಕವಾಗಿ ತಮ್ಮ ಸುಕುಮಾರಹಸ್ತದಿಂದಲೂ ಚಿವುಟದಿರುವ ಚಿಗುರುಗಳುಳ್ಳ ಇಂದ್ರೋದ್ಯಾನದಲ್ಲಿರುವ ಕಲ್ಪಾದಿ ವೃಕ್ಷಗಳು ಕೊಯ್ಯುವಿಕೆ, ಮುರಿದು ಬೀಳುವಿಕೆಎಂಬ ಭಾವವನ್ನೇ ತಿಳಿಯದಿದ್ದರೂ, ಆ ತಾರಕನಿಂದ ಇವೆರಡನ್ನೂ ಚೆನ್ನಾಗಿ ತಿಳಿದುಕೊಂಡವು, ಅಂದರೆ ತಮ್ಮ ಉಪಯೋಗಕ್ಕೂ ಸಹ ಸುರಸ್ತ್ರೀಯರು ಆವೃಕ್ಷಗಳನ್ನು ನೋಯಿಸದಿದ್ದರೂ ಈದುಷ್ಟತಾರಕನು ತನಗಾಗಿ ಅವುಗಳ ಕುಸುಮ ಕಿಸಲಯಾದಿಗಳನ್ನು ನಿರ್ದಯಹೃದಯನಾಗಿ ಕೊಯ್ಯುತ್ತಿರುವನೆಂದು ಭಾವವು

ಆಕಾಂಕ್ಷೆ—ಕ್ರಿಯಂತೇ, ಕೇ?ತೇನ, ಕೇ? ನಂದನದ್ರುಮಾಃ (ಕ, ಪ್ರ) ಕಥಂಭೂತಾಃ? ಅಭಿಜ್ಞಾಃ, ಕೇಷಾಂ? ಛೇದಪಾತಾನಾಂ, ಕಥಂಭೂತಾಃ ನಂದನದ್ರುಮಾಃ? ಸದಯಾಲೂನಪಲ್ಲವಾಃ, ಕೈಃ? ಅಮರವಧೂಹಸ್ತೈಃ,

ವಿಗ್ರಹ—(೨) ಅಮರಾಣಾಂವಧ್ವಃ-ಅಮರವಧ್ವಃ (ಷ, ತ) ಅಮರವಧೂನಾಂಹಸ್ತಾಃ-ಅಮರವಧೂಹಸ್ತಾಃ(ಷ, ತ) + ತೈಃ, (೩) ದಯಯಾಸಹವರ್ತ್ತತ ಇತಿಸದಯಂ (ಸಹ, ಅವ್ಯ, ಭಾ) ಸದಯಂಆಲೂನಾಃ-ಸದಯಾಲೂನಾಃ (ವಿ, ಪೂರ್ವ, ಕ) ಸದಯಾಲೂನಾಃ ಪಲ್ಲವಾಃ ಯೇಷಾಂ ತೇ-ಸದಯಾಲೂನಪಲ್ಲವಾಃ (ಷ, ಬ, ವ್ರೀ) (೪) ಅಭಿಜಾನಂತೀತ್ಯಭಿ

ಜ್ಞಾಃ (ಕೃ, ವೃ) (೫) ಛೇದಾಶ್ಚ ಪಾತಾಶ್ಚ - ಛೇದಪಾತಾಃ (ದ್ವಂದ್ವ) + ತೇಷಾಂ, (೭) ನಂದನೇದ್ರುಮಾಃ-ನಂದನದ್ರುಮಾಃ (ಸ, ತ).

ಧಾತುರೂಪ—(೬) ಕ್ರಿಯತೇ, ಕ್ರಿಯೇತೇ, ಕ್ರಿಯಂತೇ,
ಕ್ರಿಯಸೇ, ಕ್ರಿಯೇಥೇ, ಕ್ರಿಯಧ್ವೇ
ಕ್ರಿಯೇ, ಕ್ರಿಯಾವಹೇ, ಕ್ರಿಯಾಮಹೇ

ಧಾತ್ವರ್ಥ—(ಡುಕೃಞ್, ಕರಣೇ) ಮಾಡುವಿಕೆ ಎಂಬರ್ಥವುಳ್ಳ ತನಾದಿ ಎಂಟನೆಯಗಣದ ಉಭಯಪದಿ ಡುಕೃಞ್, ಎಂಬ ಧಾತುವು ಕರ್ಮಾರ್ಥದ ಲಟ್ ಲಕಾರದ ವರ್ತಮಾನಕಾಲದ ಪ್ರಥಮಪುರುಷ ಬಹುವಚನರೂಪದಲ್ಲಿದೆ.

ವಿಶೇಷ—(೩) ಪಲ್ಲವ-ಚಿಗುರು, ವಿಟ, (೪) ನಂದನ-ಪುತ್ರ, ಸಂತೋಷಗೊಳಿಸುವವನು, ಇಂದ್ರೋದ್ಯಾನ. ನದಿ, ಧಾತುವಿಗೆ ಲ್ಯುಟ್ ಪ್ರತ್ಯಯವುಸೇರಿ ನಂದನ, ಎಂಬ ರೂಪವಾಗುವುದು (೫) ಇಲ್ಲಿ ಕರ್ಮಾರ್ಥದಲ್ಲಿ ಷಷ್ಠಿ ಬಂದಿದೆ, ॥೪೦॥

ಶ್ಲೋ ॥ ವೀಜ್ಯತೇ ಸಹಿ ಸಂಸುಪ್ತಃ ಶ್ವಾಸ ಸಾಧಾರಣಾನಿಲೈಃ ।
ಚಾಮರೈಸ್ಸುರಬಂದೀನಾಂ ಬಾಷ್ಪಶೀಕರ ವರ್ಷಿಭಿಃ ॥೪೨॥

ಪದ—(೧) ವೀಜ್ಯತೇ (೨ ಸಃ [೩]ಹಿ(೪) ಸಂಸುಪ್ತಃ(೫) ಶ್ವಾಸಸಾಧಾರಣಾನಿಲೈಃ [೬] ಚಾಮರೈಃ [೭] ಸುರಬಂದೀನಾಂ (೮) ಬಾಷ್ಪಶೀಕರವರ್ಷಿಭಿಃ

ಶಬ್ದ—[೧] ಕ್ರಿ, (೨) ದ, ಪು, ಪ, ಪ [೩] ಅವ್ಯ, (೪) ಅ, ಪು, ಪ್ರ, ಪ (೫, ೬) ಅ, ಪು, ತೃ, ಬ [೭] ಈ ಸ್ತ್ರೀ, ಪ, ಬ (೮) ನ, ಪು ತೃ, ಬ

ಅನ್ವಯ—ಹಿ, ಸಃ, ಸಂಸುಪ್ತಸ್ಸನ್, ಶ್ವಾಸಸಾಧಾರಣಾನಿಲೈಃ ಬಾಷ್ಪಶೀಕರವರ್ಷಿಭಿಃಸುರಬಂದೀನಾಂ ಚಾಮರೈಃ ವೀಜ್ಯತೇ.

ಅರ್ಥ--ಹಿ-ಯಾವಕಾರಣದಿಂದ,ಸಃ-ಆತಾ[illegible]ನು,ಸಂಸುಪ್ತಸ್ಸನ್-ಮಲಗಿದವನಾಗಿ, ಶ್ವಾಸ - ನಿಶ್ವಾಸಕ್ಕೆ, ಸಾಧಾರಣ-ಸಮಾನವಾದ,ಅನಿಲೈಃ-ವಾಯುವುಳ್ಳ, ಬಾಷ್ಪ- ಕಣ್ಣೀರಿನ, ಶೀಕರ - ತುಂತುರುಗಳನ್ನು, ವರ್ಷಿಭಿಃ - ಸುರಿಸುತ್ತಿರತಕ್ಕ, ಸುರ - ದೇವತೆಗಳ, ಬಂದೀನಾಂ-ಸೆರೆ

ಯನ್ನು ಹೊಂದಿದ ಸ್ತ್ರೀಯರ, ಚಾಮರೈಃ - ಚಾಮರಗಳಿಂದ, ವೀಜ್ಯ ತೇ - ಬೀಸಲ್ಪಡುತ್ತಾನೆಯೋ !

ತಾತ್ಪರ್ಯ—ಈತಾರಕನು ಬಲಾತ್ಕಾರದಿಂದ ಸೆರೆಯಲ್ಲಿಟ್ಟುಕೊಂಡಿರುವ ದೇವತಾ ಸ್ತ್ರೀಯರು, ಇವನು ಮಲಗಿ ನಿದ್ರಿಸುತ್ತಿರುವಾಗ್ಗ ಚಾಮರಗಳನ್ನು ಹಿಡಿದು,ಉಸಿರಗಾಳಿಗಿಂತ ಹೆಚ್ಚಾದ ವೇಗವಿಲ್ಲದಷ್ಟು ಮೆಲ್ಲನೆ ಹೊರಡುವ ಗಾಳಿಯನ್ನು, ತಮ್ಮ ಕಣ್ಣೀರ ಹನಿಗಳೊಡನೆ ಬೀಸುತ್ತಾರೆ.

ಆಕಾಂಕ್ಷೆ—ವೀಜ್ಯತೇ, ಕೈಃ? ಚಾಮರೈಃ, ಕಃ? ಸಃ (ಕುಪ್ತಃ) ಕಸ್ಯಾಃ? ಸುರಬಂದೀನಾಂ, ಕಥಂಭೂತೈಃ ಚಾಮರೈಃ? ಬಾಷ್ಪಶೀಕರವರ್ಷಿಭಿಃ, ಪುನಃಕಥಂಭೂತೈಃ ಚಾಮರೈಃ? ಶ್ವಾಸ ಸಾಧಾರಣಾನಿಲೈಃ, ಕಥಂಭೂತಸ್ಯ? ಸಂಸುಪ್ತಸ್ಯ, ಕಃ ಃ? ಹಿ,

ವಿಗ್ರಹ—(೧) ಶ್ವಾಸೇನ ಸಾಧಾರಣಃ - ಶ್ವಾಸ ಸಾಧಾರಣಃ (ತೃ, ತ) ಶ್ವಾಸ ಸಾಧಾರಣಃ, ಅನಿಲಃ, ಯೇಷಾಂತೇ - ಶ್ವಾಸಸಾಧಾರಣಾನಿಲಾಃ (ಷ, ಬ, ವ್ರೀ) + ತೈಃ, (೨) ಸುರಾಣಾಂ ಬಂದ್ಯಃ - ಸುರಬಂದ್ಯಃ (ಷ, ತ,) + ತಾಸಾಂ, (೪) ಬಾಷ್ಪಾಣಾಂ ಶೀಕರಾಃ - ಬಾಷ್ಪಶೀಕರಾಃ (ಷ, ತ) ಬಾಷ್ಪಶೀಕರಾನ್ - ವರ್ಷಂತೀತಿ - ಬಾಷ್ಪಶೀಕರವರ್ಷಿಣಃ (ತ, ವೃ) + ತೈಃ.

ಧಾತುರೂಪ- -(೧) ವೀಜ್ಯತೇ, ವೀಜ್ಯೇತೆ, ವೀಜ್ಯಂತೇ
ವೀಜ್ಯಸೇ, ವೀಜ್ಯೇಥೇ, ವೀಜ್ಯಧ್ವೇ
ವೀಜ್ಯೇ, ವೀಜ್ಯಾವಹೇ, ವೀಜ್ಯಾಮಹೇ,

ಧಾತ್ವರ್ಥ---(ಓವಿಜೀ-ಭಯಚಲನಯೋಃ) ಹೆದರುವಿಕೆ, ಚಲಿಸುವಿಕೆ ಎಂಬರ್ಥವುಳ್ಳ 'ತುದಾದಿ' ೬ನೆಯ ಗಣದ 'ಓವಿಜೀ' ಎಂಬ ಧಾತುವು ಕರ್ಮಾರ್ಥದ 'ಲಟ್' ಲಕಾರದ ವರ್ತಮಾನಕಾಲದ ಪ್ರಥಮ ಪುರುಷ ಏಕ ವಚನರೂಪದಲ್ಲಿದೆ

ವಿಶೇಷ---(೪) ಸಮ್ಯಕ್ ಸುಪ್ತಃ - ಸಂಸುಪ್ತಃ (ಪ್ರಾ,ಸ) ಸಂ, ಎಂಬ ಉಪಸರ್ಗಪೂರ್ವಕವಾದ ಸ್ವಪ್ ಧಾತುವಿಗೆ ಕರ್ತ್ರರ್ಥದಲ್ಲಿ ಕ್ತ

ಪ್ರತ್ಯಯವು ಬಂತು (೬) ಉಸಿರಗಾಳಿಗಿಂತ ವೇಗವಾದರೆ ಅಪಚಾರವಾ ದೀತೆಂಬ ಹೆದರಿಕೆಯಿಂದ ಮೆಲ್ಲಗೆ ಬೀಸುತ್ತಿದ್ದರೆಂದು ಭಾವವು. (೮) ನಿದ್ರಿಸುವಾಗಲ್ಲದೆ ಇತರಕಾಲಗಳಲ್ಲಿ ಅಳುವುದಕ್ಕೂ ಅವಕಾಶವಿಲ್ಲದುದ ರಿಂದ ಅವನ ನಿದ್ರೆಯುಕಾಲದಲ್ಲಿ ಅಳುತ್ತಿದ್ದರೆಂಬ ಭಾವವು. ॥೪೨॥

ಶ್ಲೋ॥ ಉತ್ಪಾಟ್ಯ ಮೇರುಶೃಂಗಾಣಿ ಕ್ಷುಣ್ಣಾನಿ ಹರಿತಾಂ ಖುರೈಃ।
ಆಕ್ರೀಡಪರ್ವತಾ ಸ್ತೇನ ಕಲ್ಪಿತಾಃ ಸ್ವೇಷು ವೇಶ್ಮಸು ॥೪೩॥

ಪದ---(೧)ಉತ್ಪಾಟ್ಯ (೨) ಮೇರು ಶೃಂಗಾಣಿ (೩) ಕ್ಷುಣ್ಣಾನಿ (೪) ಹರಿತಾಂ (೫) ಖುರೈಃ (೬) ಆಕ್ರೀಡಪರ್ವತಾಃ (೭) ತೇನ (೮) ಕಲ್ಪಿತಾಃ (೯) ಸ್ವೇಷು (೧೦) ವೇಶ್ಮಸು.

ಶಬ್ದ---(೧) ಅವ್ಯ. (೨, ೩) ಅ, ನ, ದ್ವಿ,ಬ(೪) ತ, ಪು, ಷ ಬ. (೫) ಅ, ನ, ತೃ, ಬ (೬, ೮) ಅ, ಪು, ಪ್ರ, ಬ, (೭) ದ, ಪು, ತೃ, ಏ. (೯) ಅ. ನ, ಸ, ಬ. (೧೦) ನ, ನ, ಸ, ಬ.

ಅನ್ವಯ---ತೇನ, ಹರಿತಾಂಖುರೈಃ ಕ್ಷುಣ್ಣಾನಿ ಮೇರುಶೃಂಗಾಣಿ ಉತ್ಪಾಟ್ಯ ಸ್ವೇಷು ವೇಶ್ಮಸು ಆಕ್ರೀಡಪರ್ವತಾಃ ಕಲ್ಪಿತಾಃ.

ಅರ್ಥ---ತೇನ - ಆತಾರಕನಿಂದ, ಹರಿತಾಂ - ಸೂರ್ಯನ ಕುದು ರೆಗಳ, ಖುರೈಃ - ಗೊರಸುಗಳಿಂದ, ಕ್ಷುಣ್ಣಾನಿ - ಪುಡಿಪುಡಿಯಾಗಿರುವ, ಮೇರು - ಮೇರುಪರ್ವತದ, ಶೃಂಗಾಣಿ - ಶಿಖರಗಳನ್ನು, ಉತ್ಪಾಟ್ಯ- ಕಿತ್ತು, ಸ್ವೇಷು - ತನ್ನವುಗಳಾದ, ವೇಶ್ಮಸು - ಮನೆಗಳಲ್ಲಿ, ಆಕ್ರೀಡ- ಕ್ರೀಡಾರ್ಥವಾದ, ಪರ್ವತಾಃ - ಬೆಟ್ಟಗಳು, ಕಲ್ಪಿತಾಃ - ಏರ್ಪಡಿಸ ಲ್ಪಟ್ಟವು.

ತಾತ್ಪರ್ಯ---ಸೂರ್ಯನ ಕುದುರೆಗಳು ಹೆಜ್ಜೆಗಳನ್ನು ಇಟ್ಟು ಸಂಚರಿಸುತ್ತಿರುವುದರಿಂದ ಸವೆದು ಪುಡಿಪುಡಿಯಾದ ಮೇರು ಪರ್ವತದ ಶಿಖರಗಳನ್ನು ಮುರಿದು ತೆಗೆದುಕೊಂಡುಹೋಗಿ, ಆ ತಾರಕನು ತನ್ನ ಮನೆಗಳಲ್ಲಿ ಕ್ರೀಡಾಶೈಲಗಳನ್ನು ಮಾಡಿಕೊಂಡಿರುವನು.

ಆಕಾಂಕ್ಷೆ---ಕಲ್ಪಿತಾಃ, ಕೇ? ಆಕ್ರೀಡಪರ್ವತಾಃ, ಕೇನ? ತೇನ. (ಕ, ಪ್ರ) ಕೇಷು? ವೇಶ್ಮಸು, ಕಥಂಭೂತೇಷು ವೇಶ್ಮಸು ? ಸ್ವೇಷು, ಕಿಂಕೃತ್ವಾ? ಉತ್ಪಾಟ್ಯ, ಕಾನಿ? ಮೇರುಶೃಂಗಾಣಿ. ಕಥಂಭೂತಾನಿ

ಮೇರುಶೃಂಗಾಣಿ? ಕ್ಷುಣ್ಣಾನಿ, ಕೈಃ? ಖುರೈಃ. ಕೇಷಾಂ. ಹರಿತಾಂ.

ವಿಗ್ರಹ—(೨) ಮೇರೋಃ ಶೃಂಗಾಣಿ-ಮೇರುಶೃಂಗಾಣಿ (ಷ.ತ) + ತಾನಿ, (೬) ಆಕ್ರೀಡಂತೇ ವಿಷು ಇತಿ - ಆಕ್ರೀಡಾಃ [ಕೃ. ವೃ] ಆಕ್ರೀಡಾಶ್ಚ ತೇ ಪರ್ವತಾಶ್ಚ-ಆಕ್ರೀಡಪರ್ವತಾಃ (ವಿ, ಪೂರ್ವ, ಕ)

• ವಿಶೇಷ---(೧) ವ್ಯಾಖ್ಯಾತಾವ್ಯಯ (೩) ‹ಕ್ಷುದ್› ಧಾತುವಿಗೆ ಕರ್ಮಾರ್ಥದಲ್ಲಿ ‹ಕ್ತ› ಪ್ರತ್ಯಯವು ಪರವಾಗಿ, ಪ್ರತ್ಯಯದ ತಕಾರಕ್ಕೆ ನಕಾರವೂ, ಧಾತುವಿನ ದಕಾರದೊಡನೆ ಸೇರಿದ್ದರಿಂದ ದಕಾರಕ್ಕೆ ಅನುನಾಸಿಕಾದೇಶವೂ, ಈ ನಕಾರಗಳಿಗೆ ಏಕ ಪದದಲ್ಲಿ ಕ್ಷಕಾರಕ್ಕೆ ಪರದಲ್ಲಿರುವುದರಿಂದ ‹ಣ› ಕಾರಾದೇಶವೂ ಬಂದಿದೆ. (೪) ಹರಿತ್-ಸೂರ್ಯ, ಸೂರ್ಯನ ಕುದುರೆ, ದಿಕ್ಕು, ಹಸುರುಬಣ್ಣ, (ನಾನಾ) (೫) ಸೂರ್ಯನ ಕುದುರೆಗಳ ಕಾಲಿಗೆ ತಗಲುತ್ತಿದ್ದವೆಂದು ಹೇಳಿರುವುದರಿಂದ ಮೇರು ಪರ್ವತ ಶಿಖರಗಳು ಅತ್ಯುನ್ನತಗಳಾಗಿದ್ದುವೆಂದು ತೋರುವುದು (೬) ಪೂರ್ವದಲ್ಲಿ ರಾಜರು ತಮ್ಮ ಮನೆಗಳಲ್ಲಿ ಕ್ರೀಡಾಶೈಲ (ಕೃತಕಾಚಲ) ಗಳನ್ನು ಮಾಡಿಕೊಂಡು ಅಲ್ಲಿ ವಿಹರಿಸುವ ಪದ್ಧತಿಯುಂಟು (೧೦) ಮನೆಗಳು ಎಂದು ಬಹುವಚನವನ್ನು ಪ್ರಯೋಗಿಸಿರುವುದರಿಂದ ಆ ತಾರಕನಿಗೆ ವಾಸಸ್ಥಾನಗಳು ಅನೇಕಗಳೆಂದು ಸೂಚಿತವಾಗುವುದರಿಂದ ಮೂರು ಲೋಕಗಳನ್ನೂ ಆಕ್ರಮಿಸಿದ್ದನೆಂದು ಭಾವವು ॥೪೩॥

ಶ್ಲೋ॥ ಮಂದಾಕಿನ್ಯಾಃ ಪಯಃ ಶೇಷಂ ದಿಗ್ವಾರಣಮದಾವಿಲಂ ।
ಹೇಮಾಂಭೋರುಹಸಸ್ಯಾನಾಂ ತದ್ವಾಪ್ಯೋ ಧಾಮ ಸಾಂಪ್ರತಂ॥

ಪದ—(೧) ಮಂದಾಕಿನ್ಯಾಃ (೨) ಪಯಃ (೩) ಶೇಷಂ (೪) ದಿಗ್ವಾರಣಮದಾವಿಲಂ (೫) ಹೇಮಾಂಭೋರುಹಸಸ್ಯಾನಾಂ (೬) ತದ್ವಾಪ್ಯಃ (೭) ಧಾಮ (೮) ಸಾಂಪ್ರತಂ

ಶಬ್ದ—(೧) ಈ, ಸ್ತ್ರೀ, ಷ, ಏ, (೨) ಸ, ನ, ಪ್ರ, ಏ, (೩, ೪) ಅ, ನ, ಪ್ರ, ಏ, (೫) ಅ, ನ, ಷ, ಬ, (೬) ಈ,ಸ್ತ್ರೀ,ಪ್ರ, ಬ (೭) ನ, ನ, ಪ್ರ, ಏ, (೮) ಅವ್ಯ,

ಅನ್ವಯ—ಸಾಂಪ್ರತಂ ಮಂದಾಕಿನ್ಯಾಃ ದಿಗ್ವಾರಣ ಮದಾವಿಲಂ ಪಯಃ ಶೇಷಂ, ಹೇಮಾಂಭೋರುಹಸಸ್ಯಾನಾಂ ತದ್ವಾಪ್ಯಃ ಧಾಮ.

ಅರ್ಥ—ಸಾಂಪ್ರತಂ-ಈಗ, ಮಂದಾಕಿನ್ಯಾಃ-ದೇವಗಂಗೆಗೆ, ದಿಕ್-ಎಂಟುದಿಕ್ಕುಗಳಲ್ಲಿರುವ, ವಾರಣ-ಆನೆಗಳ, ಮದ - ಮದೋದಕದಿಂದ, ಆವಿಲಂ-ಕಲ್ಮಷಯುಕ್ತವಾದ, ಪಯಃ-ನೀರು, ಶೇಷಂ-ಉಳಿಯಲ್ಪಟ್ಟಿತು, ಹೇಮ-ಚಿನ್ನದ, ಅಂಭೋರುಹ-ಕಮಲವೆಂಬ, ಸಸ್ಯಾನಾಂ-ಸಸಿಗಳಿಗೆ, (ಲತೆಗಳು) ತತ್-ಆ ತಾರಕನ, ವಾಪ್ಯಃ-ಕೊಳಗಳು; ಧಾಮ-ವಾಸಸ್ಥಾನವು.

ತಾತ್ಪರ್ಯ—ಈಗ ಗಂಗಾನದಿಯಲ್ಲಿ, ಅಷ್ಟದಿಗ್ಗಜಗಳು ಬಂದು ನೀರಾಟವಾಡುವಾಗ ಅವುಗಳ ಗಂಡಸ್ಥಳಾದಿಗಳಿಂದ ಸುರಿದು ಮದೋದಕವಿಶ್ರವಾಗಿರುವ ಬರಿದು ನೀರುಮಾತ್ರವೇ ಉಳಿದಿದೆ, ಅಂದರೆ ಅದರಲ್ಲಿದ್ದ ಸ್ವರ್ಣಕಮಲಗಳನ್ನು ಸಮೂಲವಾಗಿ ಕಿತ್ತು ತನ್ನ ಜಲಕ್ರೀಡಾರ್ಥವಾದ ಕೊಳದಲ್ಲಿ ನಟ್ಟುಕೊಂಡಿರುವನೆಂದು ತಾತ್ಪರ್ಯವು.

ಆಕಾಂಕ್ಷೆ—ಧಾಮ, ಕಾಃ ? ತದ್ವಾಪ್ಯಃ, ಕೇಷಾಂ ? ಹೇಮಾಂಭೋರುಹ ಸಸ್ಯಾನಾಂ, ಶೇಷಂ. ಕಿಂ ? ಪಯಃ, ಕಥಂಭೂತಂ ಪಯಃ? ದಿಗ್ವಾರಣಮದಾವಿಲಂ, ಕಸ್ಯಾಃ ? ಮಂದಾಕಿನ್ಯಾಃ, ಕದಾ ? ಸಾಂಪ್ರತಂ.

ವಿಗ್ರಹ—(೮) ದಿಶಾಂವಾರಣಾಃ-ದಿಗ್ವಾರಣಾಃ (ಷ, ತ) ದಿಗ್ವಾರಣಾನಾಂಮದಾನಿ - ದಿಗ್ವಾರಣಮದಾನಿ [ಷ, ತ] ದಿಗ್ವಾರಣಮದೈಃ ಆವಿಲಂ - ದಿಗ್ವಾರಣಮದಾವಿಲಂ (ತೃ, ತ) (೨೧) ಹೇಮ್ನಃ ಅಂಭೋರುಹಾಣಿ - ಹೇಮಾಂಭೋರುಹಾಣಿ (ಷ, ತ) ಹೇಮಾಂಭೋರುಹಾಣ್ಯೇವ ಸಸ್ಯಾನಿ - ಹೇಮಾಂಭೋರುಹಸಸ್ಯಾನಿ (ಅವ, ಪೂರ್ವ, ಕ) + ತೇಷಾಂ (೬) ತಸ್ಯ ವಾಪ್ಯಃ-ತದ್ವಾಪ್ಯಃ (ಷ, ತ)

ವಿಶೇಷ--- (೧) ವಕ್ರವಾಗಿ ಮೆಲ್ಲಗೆ ಹರಿಯತಕ್ಕದ್ದು - ಮಂದಾಕಿನೀ (ಅವ) (೪) ಶಿಷ್ಯತೇ ಇತಿ-ಶೇಷಂ - ಕರ್ಮಾರ್ಥದಲ್ಲಿ ಅಣ್, ಪ್ರತ್ಯಯವು ಬಂತು. ಅಣ್,ಪ್ರತ್ಯಯವು (ಅ) ಣ್ ಲೋಪವಾಗುವ ಪ್ರತ್ಯಯವಾದುದರಿಂದ ಧಾತುವಿಗೆ ಆದಿಗುಣವು ಬಂದಿದೆ (೨೧) ಅಂಭಸಿರೋಹಂತೀತ್ಯಂಭೋರುಹಾಣಿ-ನೀರಿನಲ್ಲಿ ಹುಟ್ಟುವುದು. (ಕೃ, ವೃ)॥೪೪

ಶ್ಲೋ॥ ಭುವನಾಲೋಕನಪ್ರೀತಿಃ ಸ್ವರ್ಗಿಭಿ ರ್ನಾನುಭೂಯತೇ ।

ಖಿಲೀಭೂತೇ ವಿಮಾನಾನಾಂ ತದಾಪಾತಭಯಾತ್ಪಥಿ ॥೫॥

ಪದ---(೧) ಭುವನಾಲೋಕನಪ್ರೀತಿಃ (೨) ಸ್ವರ್ಗಿಭಿಃ (೩) ನ (೪) ಅನುಭೂಯತೇ (೫) ಖಿಲೀಭೂತೇ (೬) ವಿಮಾನಾನಾಂ (೭) ತದಾಪಾತಭಯಾತ್ (೮) ಪಥಿ.

ಶಬ್ದ---(೧) ಇ, ಸ್ತ್ರೀ, ಪ್ರ, ಏ (೨) ನ ಪು, ತೃ, ಬ (೩) ಅವ್ಯ (೪) ಕ್ರಿ (೫) ಅ, ಪು, ಸ, ಏ (೬) ಅ, ನ, ಷ, ಬ (೭) ಅ, ನ, ಪಂ, ಏ (೮) ನ, ಪು, ಸ, ಏ.

ಅನ್ವಯ---ತದಾಪಾತಭಯಾತ್ ವಿಮಾನಾನಾಂ ಪಥಿಖಿಲೀಭೂತೇ ಸತಿ, ಸ್ವರ್ಗಿಭಿಃ ಭುವನಾಲೋಕನಪ್ರೀತಿಃ ನಾನುಭೂಯತೇ

ಅರ್ಥ---ತತ್ - ಆತಾರಕನ, ಆಪಾತ - ಆಗಮನದ, ಭಯಾತ್ -ಭೀತಿಯು ದೆಸೆಯಿಂದ, ವಿಮಾನಾನಾಂ - ಪುಷ್ಪಕಗಳ, ಪಥಿ - ಮಾರ್ಗವು, ಖಿಲೀಭೂತೇ ಸತಿ - ನಾಶವಾಗಿರಲು, ಸ್ವರ್ಗಿಭಿಃ - ದೇವತೆಗಳಿಂದ ಭುವನ - ಲೋಕಗಳನ್ನು, ಆಲೋಕನ-ನೋಡಬೇಕೆಂಬುದರಲ್ಲಿ, ಪ್ರೀತಿಃ - ಪ್ರೇಮವು, ನಾನುಭೂಯತೇ - ಅನುಭವಿಸಲ್ಪಡುವುದಿಲ್ಲ.

ತಾತ್ಪರ್ಯ--- ಆಕಾಶ ಯಾನಗಳು ಸಂಚರಿಸುವ ಮಾರ್ಗವು ಚೆನ್ನಾಗಿದ್ದರೆ ಆ ಮಾರ್ಗವಾಗಿ ತಾರಕನು ಬಂದಾನೆಂಬ ಭಯದಿಂದ ಆ ಮಾರ್ಗಗಳಲ್ಲಿ ಪುಷ್ಪಕಗಳಲ್ಲಿ ಕುಳಿತು ಸಂಚರಿಸದೆ, ಮಾರ್ಗವನ್ನು ನಾಶಗೊಳಿಸಿದುದರಿಂದ, ವಿಮಾನದಲ್ಲಿ ಕುಳಿತು ಸಂಚರಿಸುತ್ತಾ, ಲೋಕಗಳನ್ನು ನೋಡುವುದರಿಂದ ಅನುಭವಿಸಬೇಕಾದ ಸುಖವನ್ನು ದೇವತೆಗಳು ಕಳೆದು ಕೊಂಡರು.

ಆಕಾಂಕ್ಷೆ—ನಾನುಭೂಯತೇ. ಕೈಃ ? ಸ್ವರ್ಗಿಭಿಃ, ಕಾ? ಭುವನಾಲೋಕನಪ್ರೀತಿಃ (ಕ, ಪ್ರ) ಕಥಂಭೂತೇಸತಿ ? ಖಿಲೀಭೂತೇ ಸತಿ, ಕಸ್ಮಿನ್ ? ಪಥಿ, ಕೇಷಾಂ ? ವಿಮಾನಾನಾಂ, ಕಸ್ಮಾತ್ ? ತದಾಪಾತಭಯಾತ್.

ವಿಗ್ರಹ—(೧) ಭುವನಾನಾಂ ಆಲೋಕನಂ-ಭುವನಾಲೋಕನಂ (ಷ, ತ) ಭುವನಾಲೋಕನೇಪ್ರೀತಿಃ - ಭುವನಾಲೋಕನಪ್ರೀತಿಃ (ಸ, ತ) (೫) ಅಖಿಲಃಖಿಲಃ ಸಂಪದ್ಯಮಾನಃ ಕೃತಃ - ಖಿಲೀಕೃತಃ (ಕೃ,

ವೃ) + ತಸ್ಮಿನ್ (೭) ತಸ್ಯಆಪಾತಃ-ತದಾಪಾತಃ (ಷ, ತ) ತದಾಪಾತಾತ್ ಭಯಂ ತದಾಪಾತಭಯಂ (ಪಂ, ತ) + ತಸ್ಮಾತ್,

ಧಾತುರೂಪ—(೪)

ಅನುಭೂಯತೇ, ಅನುಭೂಯೇತೇ, ಅನುಭೂಯಂತೇ,

ಅನುಭೂಯಸೇ, ಅನುಭೂಯೇಥೇ, ಅನುಭೂಯಧ್ವೇ,

ಅನುಭೂಯೇ, ಅನುಭೂಯಾವಹೇ, ಅನುಭೂಯಾಮಹೇ,

ಧಾತ್ವರ್ಥ—(ಭೂ-ಸತ್ತಾಯಾಂ) ಇರುವಿಕೆ, ಎಂಬರ್ಥವುಳ್ಳ, ‹ಭ್ವಾದಿ, ೧ನೆಯ ಗಣದ ಪರಸ್ಮೈಪದಿ ‹ಭೂ, ಎಂಬ ಧಾತುವು ‹ಅನು, ಎಂಬುಪಸರ್ಗದೊಡನೆ ಕರ್ಮಾರ್ಥದಲ್ಲಿ ವರ್ತಮಾನಕಾಲದ ಪ್ರಥಮ ಪುರುಷೈಕ ವಚನದಲ್ಲಿದೆ.

ವಿಶೇಷ—(೨) ಸ್ವರ್ಗೋಽಯೇಷಾ ಮಸ್ತೀತಿ ಸ್ವರ್ಗಿಣಃ (ತ,ವೃ) ಣಿನಿ, ಪ್ರತ್ಯಯವು ಸೇರಿದೆ (೫) ಉಭೂತ ತದ್ಭಾವಾರ್ಥದಲ್ಲಿ ‹ಚ್ವಿ, ಪ್ರತ್ಯಯವು, ಖಿಲ, ಅಪ್ರಹತ, ಇವೆರಡೂ ಏಕಾರ್ಥಕಗಳು ಸಮವಾಡದ ಪ್ರದೇಶವೆಂದರ್ಥವು ॥೪೫॥

ಶ್ಲೋ॥ ಯಜ್ವಭಿಃ ಸಂಭೃತಂ ಹವ್ಯಂ ವಿತತೇಷ್ವಧ್ವರೇಷು ಸಃ ।

ಜಾತವೇದೋಮುಖಾನ್ಮಾಯೀ ಮಿಷತಾಮಾಚ್ಛಿನತ್ತಿ ನಃ॥೪೬॥

ಪದ—(೧) ಯಜ್ವಭಿಃ (೨) ಸಂಭೃತಂ (೩) ಹವ್ಯಂ (೪) ವಿತತೇಷು (೫) ಅಧ್ವರೇಷು (೬) ಸಃ (೭) ಜಾತವೇದೋ ಮುಖಾತ್ (೮) ಮಾಯೀ (೯) ಮಿಷತಾಂ (೧೦) ಆಚ್ಛಿನತ್ತಿ (೧೧) ನಃ

ಶಬ್ದ—(೧) ನ, ಪು, ತೃ, ಬ (೨, ೩) ಅ, ನ, ದ್ವಿ, ಏ (೪, ೫) ಅ, ಪು, ಸ, ಬ (೬) ದ, ಪು, ಪ್ರ, ಏ (೭) ಅ, ನ, ಪಂ, ಏ (೮) ನ, ಪು, ಪ್ರ, ಏ (೯) ತ, ಪು, ಷ, ಬ (೧೦) ಕ್ರಿ (೧೧) ದ, ಪು, ಷ, ಬ

ಅನ್ವಯ—ಯಜ್ವಭಿಃ ವಿತತೇಷು ಅಧ್ವರೇಷು ಸಂಭೃತಂ ಹವ್ಯಂ ಸಃ ಮಾಯೀ ಜಾತವೇದೋಮುಖಾತ್ ನಃ ಮಿಷತಾಂ ಆಚ್ಛಿನತ್ತಿ

ಅರ್ಥ—ಯಜ್ವಭಿಃ - ಯಾಗಮಾಡುವವರಿಂದ, ವಿತತೇಷು - ವಿಸ್ತಾರವಾದ, ಅಧ್ವರೇಷು-ಯಜ್ಞಗಳಲ್ಲಿ, ಸಂಭೃತಂ - ಕೊಡಲ್ಪಟ್ಟ, ಹವ್ಯಂ-ಹೋಮದ್ರವ್ಯವನ್ನು, ಸಃ-ಆ, ಮಾಯೀ-ಮಾಯಾವಿಯಾದ ತಾರಕ

ನು, ಜಾತವೇದಃ - ಅಗ್ನಿಯು, ಮುಖಾತ್-ಮೂಲಕವಾಗಿ, ನಃ-ನಮ್ಮ, ಮಿಷತಾಂ-ಎದುರಿಗೆ, ಆಚ್ಛಿನತ್ತಿ-ಕಿತ್ತುಕೊಳ್ಳುತ್ತಾನೆ.

ತಾತ್ಪರ್ಯ—ಯಜಮಾನರು ದೊಡ್ಡದೊಡ್ಡಯಜ್ಞಗಳಲ್ಲಿ ಅಗ್ನಿ ಮುಖದಲ್ಲಿ ಕೊಡುವ ಹವಿರ್ಭಾಗವನ್ನು ಬಲಾತ್ಕಾರವಾಗಿ ಅಪಹರಿಸುತ್ತಾ ದೇವತೆಗಳಿಗೆ ಸ್ವಲ್ಪವೂ ಸಿಕ್ಕದಂತೆ ಮಾಡುತ್ತಾನೆ.

ಆಕಾಂಕ್ಷೆ—ಆಚ್ಛಿನತ್ತಿ, ಕಃ ? ಮಾಯೀ, ಕಿಂ ? ಹವ್ಯಂ (ಸ, ಪ್ರ) ಕುತ್ರ ? ಮಿಷತಾಂ, ಕಸ್ಯ ? ನಃ, ಕಸ್ಮಾತ್? ಜಾತವೇದೋಮುಖಾತ್, ಕಥಂಭೂತಃ? ಮಾಯೀ ? ಸಃ, ಕಥಂಭೂತಂ ಹವ್ಯಂ? ಸಂಭೃತಂ, ಕೇಷು? ಅಧ್ವರೇಷು, ಕಥಂಭೂತೇಷು ಅಧ್ವರೇಷು? ವಿತತೇಷು, ಕೈಃ ? ಯಜ್ವಭಿಃ.

ವಿಗ್ರಹ—(೭) ಜಾತವೇದಾ ಏವ, ಮುಖಂ-ಜಾತವೇದೋಮುಖಂ (ಅವ, ಪೂರ್ವ, ಕ) + ತಸ್ಮಾತ್.

ಧಾತುರೂಪ---(೧೦)

| | | |
|---|---|---|
| ಆಚ್ಛಿನತ್ತಿ, | ಆಚ್ಛಿಂತಃ, | ಆಚ್ಛಿಂದಂತಿ |
| ಆಚ್ಛಿನತ್ಸಿ, | ಆಚ್ಛಿಂತಃ, | ಆಚ್ಛಿಂಥ |
| ಆಚ್ಛಿನದ್ಮಿ, | ಆಚ್ಛಿಂದ್ವಃ, | ಆಚ್ಛಿಂದ್ಮಃ |

ಧಾತ್ವರ್ಥ---(ಛಿದಿರ್ - ದ್ವೈಧೀಕರಣೇ) ಎರಡುಭಾಗಮಾಡುವಿಕೆ, ಎಂಬರ್ಥವುಳ್ಳ, ‹ರುಧಾದಿ, ಏಳನೆಯ ಗಣದ ಉಭಯಪದಿ›ಛಿದಿರ್ ಎಂಬುವ ಧಾತುವಿಗೆ ‹ಆ, ಎಂಬ ಉಪಸರ್ಗವು ಸೇರಿ ‹ಕಸು ಕೊಳ್ಳುವುದು ಎಂಬರ್ಥವುಳ್ಳುದಾಗಿ ಪರಸ್ಮೈಪದದ ‹ಲಟ್›, ಲಕಾರದ ವರ್ತಮಾನಕಾಲದ ಪ್ರಥಮಪುರುಷೈಕವಚನದಲ್ಲಿದೆ

ವಿಶೇಷ---(೧) ಯಜತಇತಿ ಯಜ್ವಾ (ಕೃ, ವೃ.) ಙ್ವನಿಪ್, ಪ್ರತ್ಯಯವು ಬಂತು (೨) ‹ಭೃಞ್›, ಎಂಬ ಧಾತುವಿಗೆ ‹ಸಂ, ಎಂಬ ಉಪಸರ್ಗವು ಸೇರಿ ಕರ್ಮಾರ್ಥದಲ್ಲಿ ಕ್ತ, ಪ್ರತ್ಯಯವು ಸೇರಿದೆ, (೩) ಹೂಯತಇತಿ ಹವ್ಯಂ (ಕೃ, ವೃ) ಯತ್, ಪ್ರತ್ಯಯವು ಬಂತು (೭) ಜಾತವೇದಾಃ-ವೇದಗಳು ಅಥವಾ ಜನ್ಮವು ಈತನಲ್ಲಿ ಹುಟ್ಟಿವೆ ಎಂದೂ, ಎಲ್ಲಾ ಪ್ರಾಣಿಗಳಲ್ಲೂ ಇರುವನೆಂದೂ, ಶುಭಾಶುಭಜ್ಞಾನವುಳ್ಳವನೆಂದೂ

ಅವಯವಾರ್ಥವು (೮) ಮಾಯಯಾಽಲಿಪ್ಯತೀತಿ ಮಾಯೀ (ತ, ಪ್ರ) ವ್ರೀಹ್ಯಾದಿ ಗಣದಲ್ಲಿ ಸೇರಿರುವುದರಿಂದ 'ಇನಿ' ಪ್ರತ್ಯಯವು ಸೇರಿದೆ. (೯) ನಮ್ಮೆದುರಿಗೆ ಅಂದರೆ ನಮ್ಮನ್ನು ಲಕ್ಷೀಕರಿಸದೆ ಎಂದು ಅರ್ಥವಾದುದರಿಂದ ಅನಾದರಾರ್ಥದಲ್ಲಿ ಷಷ್ಠೀವಿಭಕ್ತಿ ಬಂದಿದೆ.

ಶ್ಲೋ॥ ಉಚ್ಚೈರುಚ್ಚೈಃಶ್ರವಾಸ್ತೇನ ಹಯರತ್ನಮಹಾರಿ ಚ ।
ದೇಹಬದ್ಧಮಿವೇಂದ್ರಸ್ಯ ಚಿರಕಾಲಾರ್ಜಿತಂ ಯಶಃ ॥೪೭॥

ಪದ—(೧) ಉಚ್ಚೈಃ (೨) ಉಚ್ಚೈಃಶ್ರವಾಃ (೩) ತೇನ, (೪) ಹಯರತ್ನಂ (೫) ಅಹಾರಿ (೬) ಚ (೭) ದೇಹಬದ್ಧಂ (೮) ಇವ (೯) ಇಂದ್ರಸ್ಯ (೧೦) ಚಿರಕಾಲಾರ್ಜಿತಂ (೧೧) ಯಶಃ.

ಶಬ್ದ---(೧, ೬, ೮) ಅವ್ಯ, (೨) ಸ, ಪು, ಪ್ರ, ಏ (೩) ದ, ಪು, ತೃ, ಏ (೪, ೭, ೧೦) ಅ, ನ, ಪ್ರ, ಏ (೫) ಕ್ರಿ (೯) ಅ, ಪು, ಷ, ಏ (೧೧) ಸ, ನ, ಪ್ರ, ಏ.

ಅನ್ವಯ—ತೇನ ಉಚ್ಚೈಃ ಉಚ್ಚೈಃಶ್ರವಾಃ (ನಾಮ) ಹಯರತ್ನಂಚ ದೇಹಬದ್ಧಂ ಚಿರಕಾಲಾರ್ಜಿತಂ ಇಂದ್ರಸ್ಯ ಯಶಇವ ಅಹಾರಿ,

ಅರ್ಥ---ತೇನ-ಆ ತಾರಕನ, ಉಚ್ಚೈಃ-ಉನ್ನತವಾದ, ಉಚ್ಚೈಃಶ್ರವಾಃ-ಉಚ್ಚೈಃಶ್ರವಸ್ಸೆಂದು, ನಾಮ-ಪ್ರಸಿದ್ಧವಾದ, ಹಯರತ್ನಂಚ-ಅಶ್ವಶ್ರೇಷ್ಠವೂ, ದೇಹ-ಶರೀರವನ್ನು, ಬದ್ಧಂ-ಹೊಂದಿರುವ, ಚಿರಕಾಲ-ಬಹುಕಾಲದಿಂದ, ಆರ್ಜಿತಂ-ಸಂಪಾದಿಸಲ್ಪಟ್ಟ, ಇಂದ್ರಸ್ಯ-ಇಂದ್ರನ ಯಶಇವ-ಕೀರ್ತಿಯೋಪಾದಿಯಲ್ಲಿ, ಅಹಾರಿ-ಅಪಹರಿಸಲ್ಪಟ್ಟಿತು.

ತಾತ್ಪರ್ಯ---ಇಂದ್ರನ ಕೀರ್ತಿಯು ಮೂರ್ತೀಭವಿಸಿದೆಯೋ ಎಂಬಂತೆ ಅತ್ಯುನ್ನತವಾಗಿರುವ ಉಚ್ಚೈಃಶ್ರವವೆಂಬ ಅಶ್ವರತ್ನವನ್ನೂ ಈ ತಾರಕನು ಅಪಹರಿಸಿರುವನು. ಅಂದರೆ ಇದರಿಂದ ಇಂದ್ರನ ಯಶಸ್ಸನ್ನೇ ಅಪಹಾರಮಾಡಿದಂತಾಗಿದೆ. ಇದು ಅವನಿಗೆ ಅವಮಾನಕರವಾದದ್ದು ಎಂದು ಭಾವವು.

ಆಕಾಂಕ್ಷೆ---ಅಹಾರಿ, ಕೇನ ? ತೇನ, ಕಿಂಚ ? ಹಯರತ್ನಂಚ, (ಕ, ಪ್ರ) ಕಿಮಿವ ? ಯಶಇವ, ಕಸ್ಯ ? ಇಂದ್ರಸ್ಯ, ಕಥಂಭೂತಂ ಯಶಃ ? ದೇಹಬದ್ಧಂ, ಪುನಃಕಥಂಭೂತಂ ಯಶಃ ? ಚಿರಕಾಲಾರ್ಜಿತಂ.

ಕಥಂಭೂತಂ ಹಯರತ್ನಂ ? ಉಚ್ಚೈಃಶ್ರವಾನಾಮ. ಪುನಃ ಕಥಂಭೂತಂ ಹಯರತ್ನಂ ? ಉಚ್ಚೈಃ.

ವಿಗ್ರಹ—(೨) ಉಚ್ಚೈಃಶ್ರವಸೀಯಸ್ಯಸಃ, ಉಚ್ಚೈಃಶ್ರವಾಃ (ಷ, ಬ, ವ್ರೀ) (೪) ಹಯೋರತ್ನಮಿವ, ಹಯರತ್ನಂ (ಉ, ಉಕ) (೭) ಬದ್ಧಃ ದೇಹಃ ಯೇನತತ್-ದೇಹಬದ್ಧಂ (ತೃ, ಬ, ವ್ರೀ) (೧೦) ಚಿರಂ ಕಾಲಃ-ಚಿರಕಾಲಃ (ವಿ, ಪೂರ್ವ, ಕ) ಚಿರಕಾಲೇನ ಆರ್ಜಿತಂ - ಚಿರಕಾಲಾರ್ಜಿತಂ (ತೃ, ತ)

ಧಾತುರೂಪ—ಅಹಾರಿ, ಅಹಾರಿಷಾತಾಂ, ಅಹಾರಿಷತ,
ಅಹಾರಿಷ್ಠಾಃ, ಅಹಾರಿಷಾಥಾಂ, ಅಹಾರಿಢ್ವಂ,
ಅಹಾರಿಷಿ, ಅಹಾರಿಷ್ವಹಿ, ಅಹಾರಿಷ್ಮಹಿ,

ಧಾತ್ವರ್ಥ—(ಹೃಞ್ - ಹರಣೇ) ಹೋಗಲಾಡಿಸುವಿಕೆ, ಎಂಬರ್ಥವುಳ್ಳ 'ಭ್ವಾದಿ, ಒಂದನೆಯ ಗಣದ ಉಭಯಪದಿ ‹ ಹೃಞ್ , ಎಂಬ ಧಾತುವು ಕರ್ಮಾರ್ಥದ ‹ ಲುಙ್ , ಲಕಾರದ ಭೂತಕಾಲದ ಪ್ರಥಮಪುರುಷೈಕವಚನದಲ್ಲಿದೆ.

ವಿಶೇಷ—(೪) ರತ್ನ= ಮಣಿ, ಶ್ರೇಷ್ಠ (ನಾನಾ) (೭) ಆಹಿತಾಗ್ನ್ಯಾದಿ ಗಣದಲ್ಲಿ ಸೇರಿರುವುದರಿಂದ ‹ ಬದ್ಧ , ಎಂಬ ‹ ಕ್ತ , ಪ್ರತ್ಯಯಾಂತವಾದ ನಿಷ್ಠಾಶಬ್ದಕ್ಕೆ ಪೂರ್ವನಿಪಾತವು ಬಂತು. ಈ ಶ್ಲೋಕದಲ್ಲಿ ಕೀರ್ತಿಯೂ, ಕುದುರೆಯೂ ಶುಭ್ರವರ್ಣಗಳಾಗಿರುವುದರಿಂದ ಕುದುರೆಯನ್ನು ಕೀರ್ತಿಯೆಂದು ಸಂಭಾವನೆ ಮಾಡಿ ' ತಾರಕನು ಕುದುರೆಯನ್ನು ಅಪಹರಿಸಿದುದು ಇಂದ್ರನ ಕೀರ್ತಿಯನ್ನೇ ಅಪಹಾರಮಾಡಿದನೋ ಎಂಬಂತಿತ್ತು ' ಎಂದು ವಾಕ್ಯಾರ್ಥವು ಇರುವುದರಿಂದ ಅಶ್ವರೂಪ ವಸ್ತುವನ್ನು ಕೀರ್ತಿರೂಪ ವಸ್ತುವಾಗಿ ಉತ್ಪ್ರೇಕ್ಷಿಸಿದಂತಾಯ್ತು. ಉಕ್ತವಸ್ತೂತ್ಪ್ರೇಕ್ಷೆ.

ಶ್ಲೋ॥ ತಸ್ಮಿನ್ನುಪಾಯಾಃ ಸರ್ವೇ ನಃ ಕ್ರೂರೇ ಪ್ರತಿಹತಕ್ರಿಯಾಃ।
ವೀರ್ಯವನ್ತ್ಯೌಷಧಾನೀವ ವಿಕಾರೇ ಸಾನ್ನಿಪಾತಿಕೇ ॥೪೮॥

ಪದ—(೧) ತಸ್ಮಿನ್ (೨) ಉಪಾಯಾಃ (೩) ಸರ್ವೇ (೪) ನಃ (೫) ಕ್ರೂರೇ (೬) ಪ್ರತಿಹತಕ್ರಿಯಾಃ (೭) ವೀರ್ಯವಂತಿ (೮) ಔಷಧಾನಿ (೯) ಇವ (೧೦) ವಿಕಾರೇ (೧೧) ಸಾನ್ನಿಪಾತಿಕೇ.

ಶಬ್ದ—(೧) ದ,ಪು,ಸ,ಏ (೨, ೬) ಅ,ಪು,ಪ್ರ,ಬ (೩) ಅ,ಪು,ಪ್ರ,ಬ (೪) ದ,ಪು,ಷ,ಬ (೫,೧೦,೧೧) ಅ,ಪು,ಸ,ಏ (೭) ತ,ನ,ಪ್ರ,ಬ (೮) ಅ,ನ,ಪ್ರ,ಬ (೯) ಅವ್ಯ.

ಅನ್ವಯ---ತಸ್ಮಿನ್ ಕ್ರೂರೇ,ನಃ ಸರ್ವೇ ಉಪಾಯಾಃ,ಸಾನ್ನಿಪಾತಕೇ ವಿಕಾರೇ ವೀರ್ಯವಂತಿ ಔಷಧಾನೀವ, ಪ್ರತಿಹತಕ್ರಿಯಾಃ(ಭವಂತಿ)

ಅರ್ಥ—ತಸ್ಮಿನ್-ಆ, ಕ್ರೂರೇ - ಕಠಿನನಾದ ತಾರಕನಲ್ಲಿ, ನಃ-ನಮ್ಮ, ಸರ್ವೇ-ಸಮಸ್ತವಾದ, ಉಪಾಯಃ - ಉಪಾಯಗಳು, ಸಾನ್ನಿಪಾತಿಕೇ-ಸನ್ನಿಪಾತ ಜ್ವರಸಂಬಂಧವಾದ, ವಿಕಾರೇ-ಚೇಷ್ಟೆಗಳಲ್ಲಿ, ವೀರ್ಯವಂತಿ-ಸಾರವತ್ತಾದ, ಔಷಧಾನೀವ-ಔಷಧಗಳೋಪಾದಿಯಲ್ಲಿ,ಪ್ರತಿಹತ-ತಡೆಯಲ್ಪಟ್ಟ, ಕ್ರಿಯಾಃ-ವ್ಯಾಪಾರವುಳ್ಳವುಗಳು, [ಭವಂತಿ-ಆಗುತ್ತವೆ].

ತಾತ್ಪರ್ಯ---ಸನ್ನಿಪಾತ ಜ್ವರದಿಂದ ಜ್ಞಾನವಿಲ್ಲದೆ ವಿಕಾರಚೇಷ್ಟೆಗಳನ್ನು ಮಾಡುತ್ತಿರುವವನಿಗೆ, ಎಷ್ಟು ಶ್ರೇಷ್ಠವಾದ ಮತ್ತು ಬಲವಾದ ಔಷಧಗಳನ್ನು ಪ್ರಯೋಗಿಸಿದರೂ ನಾಟದೆಯೂ, ಸನ್ನಿಯನ್ನು ಮುರಿಯಲಾರದೆಯೂ ಹೋಗಿ, ಔಷಧದ ವ್ಯಾಪಕತಾಶಕ್ತಿಯು ಹೇಗೆ ಕುಂಠಿತವಾಗುವುದೋ ಹಾಗೆಯೇ, ಆ ಕ್ರೂರನಾದ ತಾರಕನಲ್ಲಿ ನಾವು ಮಾಡುವ ಸಾಮಾದ್ಯುಪಾಯಗಳೊಂದೂ ಕಾರ್ಯಕಾರಿಗಳಾಗದೆ ವ್ಯರ್ಥವಾಗುವುವು.

ಆಕಾಂಕ್ಷೆ---ಭವಂತಿ, ಕೇ ? ಉಪಾಯಾಃ (ಅ, ಪ್ರ) ಕಥಂಭೂತಾಃ ? ಪ್ರತಿಹತಕ್ರಿಯಾಃ, ಕಾನೀವ ? ಔಷಧಾನೀವ, ಕಥಂಭೂತಾನಿ ಔಷಧಾನಿ? ವೀರ್ಯವಂತಿ, ಕಸ್ಮಿನ್ ? ವಿಕಾರೇ, ಕಥಂಭೂತೇ ವಿಕಾರೇ? ಸಾನ್ನಿಪಾತಿಕೇ, ಕಥಂಭೂತಾಃ ಉಪಾಯಾಃ ? ಸರ್ವೇ, ಕೇಷಾಂ ? ನಃ, ಕಸ್ಮಿನ್ ? ಕ್ರೂರೇ, ಕಥಂಭೂತೇ ಕ್ರೂರೇ ತಸ್ಮಿನ್.

ವಿಗ್ರಹ---(೬) ಪ್ರತಿಹತಾಃ ಕ್ರಿಯಾಃ ಯೇಷಾಂತೇ - ಪ್ರತಿಹತಕ್ರಿಯಾಃ (ಷ, ಬ, ವ್ರಿ)

ವಿಶೇಷ---(೨) ಸಾಮ, ದಾನ, ಭೇದ, ದಂಡ ಇವು ನಾಲ್ಕು ಉಪಾಯಗಳು. (೫) ಘಾತುಕ, ಹಿಂಸ್ರ, ನೃಶಂಸ, ಕ್ರೂರ; ಇವು ಏಕಾರ್ಥಕಗಳು. (೧೧) ಸನ್ನಿಪಾತೇಜಾತಃ-ಸಾನ್ನಿಪಾತಿಕಃ [ತ,ವೃ] ಅಲ್ಲಿ ಹುಟ್ಟಿತೆಂಬರ್ಥದಲ್ಲಿ 'ಠಕ್' ಪ್ರತ್ಯಯವು ಬಂತು. ಇಲ್ಲಿ ಪ್ರತ್ಯಯದ ಠಕಾರಕ್ಕೆ ಇಕಾದೇಶವು ಬಂತು. ಕಕಾರವು ಲೋಪವಾಗತಕ್ಕ ಪ್ರತ್ಯಯವಾದುದರಿಂದ ಶಬ್ದದ ಆದಿಸ್ವರಕ್ಕೆ ವೃದ್ಧಿಬಂದು 'ಸಾನ್ನಿಪಾತಿಕ' ವೆಂದಾಯ್ತು.

ಈ ಶ್ಲೋಕದ ಉಪಾಯಗಳೆಂಬ ಉಪಮೇಯವೂ, ಔಷಧಿಗಳೆಂಬ ಉಪಮಾನವೂ, ಪ್ರತಿಹತಕ್ರಿಯಾಃ ಎಂಬ ಸಾಮಾನ್ಯ ಧರ್ಮವೂ, ಇವ ಎಂಬ ವಾಚಕ ಶಬ್ದವೂ ಇರುವುದರಿಂದ ಪೂರ್ಣೋಪಮಾಲಂಕಾರವು ॥೪೮॥

ಶ್ಲೋ॥ ಜಯಾಶಾ ಯತ್ರ ಚಾಸ್ಮಾಕಂ ಪ್ರತಿಘಾತೋತ್ಥಿತಾರ್ಚಿಷಾ ।
ಹರಿಚಕ್ರೇಣ ತೇನಾಸ್ಯ ಕಂಠೇ ನಿಷ್ಕಮಿವಾರ್ಪಿತಂ ॥೪೯॥

ಪದ---(೧) ಜಯಾಶಾ (೨) ಯತ್ರ (೩) ಚ [೪] ಅಸ್ಮಾಕಂ [೫] ಪ್ರತಿಘಾತೋತ್ಥಿತಾರ್ಚಿಷಾ (೬) ಹರಿಚಕ್ರೇಣ (೭) ತೇನ (೮) ಅಸ್ಯ (೯) ಕಂಠೇ (೧೦) ನಿಷ್ಕಂ (೧೧) ಇವ (೧೨) ಅರ್ಪಿತಂ.

ಶಬ್ದ---(೧) ಆ,ಸ್ತ್ರೀ,ಪ್ರ,ಏ (೨,೩,೧೧) ಅವ್ಯ (೪) ದ,ಪು,ಷ,ಬ (೫) ಷ,ನ,ತೃ,ಏ (೬) ಅ,ಪು,ತೃ,ಏ (೭) ದ,ನ,ತೃ,ಏ (೮) ದ,ಪು,ಷ,ಏ (೯) ಅ,ಪು,ಸ,ಏ (೧೦,೧೨) ಅ,ನ,ಪ್ರ,ಏ.

ಅನ್ವಯ —ಯತ್ರ ಅಸ್ಮಾಕಂ ಜಯಾಶಾ (ಆಸೀತ್) ಪ್ರತಿಘಾತೋತ್ಥಿತಾರ್ಚಿಷಾ ತೇನ ಹರಿಚಕ್ರೇಣಚ, ಅಸ್ಯಕಂಠೇ ನಿಷ್ಕಂ ಅರ್ಪಿತಮಿವ.

ಅರ್ಥ —ಯತ್ರ - ಯಾವ ಸುದರ್ಶನದಲ್ಲಿ, ಅಸ್ಮಾಕಂ - ನಮಗೆ, ಜಯಾಶಾ-ಜಯಾಪೇಕ್ಷೆಯು (ಆಸೀತ್-ಇದ್ದಿತೋ) ಪ್ರತಿಘಾತ-ಎದುರೇಟನಿಂದ, ಉತ್ಥಿತ-ಮೇಲಕ್ಕೆ ಎದ್ದ, ಅರ್ಚಿಷಾ-ತೇಜಸ್ಸುಳ್ಳ, ತೇನ - ಆ, ಹರಿ-ವಿಷ್ಣುವಿನ, ಚಕ್ರೇಣಚ - ಚಕ್ರದಿಂದಲೇ, ಅಸ್ಯ - ಈ ತಾರಕನ,

ಕಂಠೇ-ಕೊರಲಲ್ಲಿ, ನಿಷ್ಕಂ-ಕಂಠಾಭರಣವು, ಅರ್ಪಿತಮಿವ-ಕೊಡಲ್ಪಟ್ಟಿತೋ ಎಂಬಂತಾಯಿತ್ತು.

ತಾತ್ಪರ್ಯ—ವಿಷ್ಣುವಿನ ಸುದರ್ಶನದಿಂದಲಾದರೂ ನಮಗೆ ಜಯವುಂಟಾಗುವುದೆಂದು ನಾವು ಭಾವಿಸಿದ್ದೆವು. ವಿಷ್ಣುವು ಆ ತಾರಕನ ಕೊರಲನ್ನು ಕತ್ತರಿಸಲೆಂದು, ಯುದ್ಧದಲ್ಲಿ ಪ್ರಯೋಗಿಸಿದ ಆತನ ಚಕ್ರವೂ ಸಹ, ಪ್ರತಿಯಾಗಿ ತಾರಕನು ಪ್ರಯೋಗಿಸಿದ ಬಾಣಗಳಿಂದ ತಡೆಯನ್ನು ಹೊಂದಿ ಅವನ ಕೊರಲ ಸಮೀಪದಲ್ಲಿ ಸುಮ್ಮನೆ ಇರುವುದನ್ನು ನೋಡಿದರೆ ಅವನ ಕೊರಲಲ್ಲಿರುವ ಪದಕವೋ ಎನ್ನುವಹಾಗಿತ್ತು. ಅಂದರೆ ಸುದರ್ಶನವೂ ಅವನನ್ನು ಜಯಿಸಲಾರದೆ ಹಿಂದೆಗೆಯಿತೆಂದು ಭಾವವು.

ಆಕಾಂಕ್ಷೆ—ಅರ್ಪಿತಮಿವ, ಕೇನಚ ? ಹರಿಚಕ್ರೇಣಾಪಿ, ಕಿಂ ? ನಿಷ್ಕಂ, ಕಸ್ಮಿನ್ ? ಕಂಠೇ, ಕಸ್ಯ ? ಅಸ್ಯ, ಕಥಂಭೂತೇನ ಹರಿಚಕ್ರೇಣ ? ತೇನ, ಪುನಃ ಕಥಂಭೂತೇನ ಹರಿಚಕ್ರೇಣ ? ಪ್ರತಿಘಾತೋತ್ಥಿತಾರ್ಚಿಷಾ, (ಆಸೀತ್) ಕಾ ? ಜಯಾಶಾ, ಕೇಷಾಂ ? ಅಸ್ಮಾಕಂ, ಕುತ್ರ ? ಯತ್ರ.

ವಿಗ್ರಹ—[೧] ಜಯೇ, ಆಶಾ-ಜಯಾಶಾ(ಸ,ತ)(೨) ಪ್ರತಿಘಾತೇನ ಉತ್ಥಿತಾ-ಪ್ರತಿಘಾತೋತ್ಥಿತಾ (ತೃ,ತ) ಪ್ರತಿಘಾತೋತ್ಥಿತಾ ಅರ್ಚಿಃ ಯಸ್ಮಿಂಸ್ತತ್-ಪ್ರತಿಘಾತೋತ್ಥಿತಾರ್ಚಿಃ (ಸ,ಬ,ವ್ರೀ) + ತೇನ (೬) ಹರೇಃ ಚಕ್ರಂ-ಹರಿಚಕ್ರಂ [ಷ,ತ] + ತೇನ.

ವಿಶೇಷ—(೧) ಆಶಾ-ಇಚ್ಛೆ, ದಿಕ್ಕು (೨) ಸಪ್ತಮಿಗೆ ಬದಲಾಗಿ ' ತ್ರಲ್ ' ಪ್ರತ್ಯಯವು ಬಂತು. (೧೦) ನಿಷ್ಕಃ, ನಿಷ್ಕಂ-೧೦೮ ಸುವರ್ಣ ನಾಣ್ಯಗಳು, ಚಿನ್ನ, ಕಂಠಾಭರಣ, ಪಲಪ್ರಮಾಣ, ದೀನಾರ (ಚಿನ್ನದ ನಾಣ್ಯವಿಶೇಷ) ಇವು ನಾನಾರ್ಥಗಳು—ಈ ಶ್ಲೋಕದಲ್ಲಿ ಸುವರ್ಣ ಕಂಠಾಭರಣವೆಂಬಂತೆ ಸುದರ್ಶನ ಚಕ್ರವನ್ನು ಉತ್ಪ್ರೇಕ್ಷಿಸಿರುವುದರಿಂದ, ಸಿದ್ಧವಸ್ತೂತ್ಪ್ರೇಕ್ಷಾಲಂಕಾರವು ॥೪೯॥

ಶ್ಲೋ॥ ತದೀಯಾ ಸ್ತೋಯದೇಷ್ವದ್ಯ ಪುಷ್ಕರಾವರ್ತಕಾದಿಷು ।
ಅಭ್ಯಸ್ಯಂತಿ ತಟಾಘಾತಂ ನಿರ್ಜಿತೈರಾವತಾ ಗಜಾಃ ॥೫೦॥

ಪದ—(೧) ತದೀಯಾಃ (೨) ತೋಯದೇಷು (೩) ಅದ್ಯ (೪) ಪುಷ್ಕರಾವರ್ತಕಾದಿಷು (೫) ಅಭ್ಯಸ್ಯಂತಿ (೬) ತಟಾಘಾತಂ (೭) ನಿರ್ಜಿತೈರಾವತಃ (೮) ಗಜಾಃ.

ಶಬ್ದ—(೧,೭,೮) ಅ,ಪು,ಪ್ರ,ಬ (೨) ಅ, ಪು, ಸ, ಬ (೩) ಅವ್ಯ (೪) ಇ,ಪು,ಸ,ಬ (೫) ಕ್ರಿ (೬) ಅ,ಪು,ದ್ವಿ,ಏ.

ಅನ್ವಯ—ಅದ್ಯತದೀಯಾಃ ನಿರ್ಜಿತೈರಾವತಾಃ ಗಜಾಃ, ಪುಷ್ಕರಾವರ್ತಕಾದಿಷು, ತೋಯದೇಷು, ತಟಾಘಾತಂ ಅಭ್ಯಸ್ಯಂತಿ.

ಅರ್ಥ—ಅದ್ಯ-ಈಗ, ತದೀಯಾಃ-ಆ ತಾರಕನ ಸಂಬಂಧಗಳಾದ, ನಿರ್ಜಿತ-ಜಯಿಸಲ್ಪಟ್ಟ, ಐರಾವತಾಃ-ಐರಾವತವುಳ್ಳ, ಗಜಾಃ-ಆನೆಗಳು, ಪುಷ್ಕರ-ಪುಷ್ಕರವೂ, ಆವರ್ತಕ-ಆವರ್ತಕವೂ, ಆದಿಷು - ಮೊದಲಾದ, ತೋಯದೇಷು-ಮೇಘಗಳಲ್ಲಿ, ತಟ-ಅಂಚಿನಲ್ಲಿ, ಆಘಾತಂ - ಕೊಂಬುಗಳಿಂದ ಹೊಡಿಯೋಣವನ್ನು (ವಪ್ರಕ್ರೀಡೆ), ಅಭ್ಯಸ್ಯಂತಿ-ಕಲಿಯುತ್ತವೆ.

ತಾತ್ಪರ್ಯ---ಆ ತಾರಕನ ಮದದ ಆನೆಗಳು ಐರಾವತವನ್ನು ಜಯಿಸಿ, ತವಿನ್ಮೊಡನೆ ಹೋಲುವ ಆನೆಗಳಿಲ್ಲದುದನ್ನು ಕಂಡು ಪುಷ್ಕರ, ಆವರ್ತಕ ಮೊದಲಾದ ನವಮೇಘಗಳೊಡನೆ ವಪ್ರಕ್ರೀಡೆಯನ್ನು ಮಾಡುವುದಕ್ಕೆ ಈಗ ಪ್ರಾರಂಭಿಸಿವೆ.

ಆಕಾಂಕ್ಷೆ---ಅಭ್ಯಸ್ಯಂತಿ, ಕೇ? ಗಜಾಃ, ಕಂ? ತಟಾಘಾತಂ (ಸ, ಪ್ರ.) ಕೇಷು ? ತೋಯದೇಷು, ಕಥಂಭೂತೇಷು ತೋಯದೇಷು? ಪುಷ್ಕರಾವರ್ತಕಾದಿಷು, ಕಥಂಭೂತಾಃ ಗಜಾಃ ? ನಿರ್ಜಿತೈರಾವತಾಃ, ಪುನಃ ಕಥಂಭೂತಾಃ ಗಜಾಃ ? ತದೀಯಾಃ, ಕದಾ ? ಅದ್ಯ.

ವಿಗ್ರಹ---(೧) ತಸ್ಯಇಮೇ-ತದೀಯಾಃ (ತ, ವೃ) (೨) ತೋಯಂ, ದದತೀತಿ-ತೋಯದಾಃ (ಉಪ. ಸ) + ತೇಷು (೪) ಪುಷ್ಕರಶ್ಚ ಆವರ್ತಕಶ್ಚ-ಪುಷ್ಕರಾವರ್ತಕೌ (ದ್ವಂದ್ವ) ಪುಷ್ಕರಾವರ್ತಕೌ ಆದ್ಯೌ ಏಷಾಂತೇ-ಪುಷ್ಕರಾವರ್ತಕಾದ್ಯಾಃ [ಷ,ಬ ವ್ರೀ, + ತೇಷು (೬) ತಟೇ ಆಘಾತಃ-ತಟಾಘಾತಃ (ಸ. ತ) + ತಂ (೭) ನಿರ್ಜಿತಃ ಐರಾವತಃ ಯೈಸ್ತೇ ನಿರ್ಜಿತೈರಾವತಾಃ (ತೃ, ಬ, ವ್ರೀ)

ಧಾತುರೂಪ---(೫) ಅಭ್ಯಸ್ಯತಿ, ಅಭ್ಯಸ್ಯತಃ, ಅಭ್ಯಸ್ಯಂತಿ,
ಅಭ್ಯಸ್ಯಸಿ, ಅಭ್ಯಸ್ಯಥಃ, ಅಭ್ಯಸ್ಯಥ,
ಅಭ್ಯಸ್ಯಾಮಿ, ಅಭ್ಯಸ್ಯಾವಃ, ಅಭ್ಯಸ್ಯಾಮಃ.

ಧಾತ್ವರ್ಥ--- (ಅಸು-ಕ್ಷೇಪಣೇ) ಬಿಡುವಿಕೆ, ಎಂಬರ್ಥವುಳ್ಳ 'ದಿವಾದಿ' ನಾಲ್ಕನೆಯ ಗಣದ 'ಅಸು' ಎಂಬ ಧಾತುವಿಗೆ 'ಅಭಿ' ಎಂಬ ಉಪಸರ್ಗವು ಸೇರಿ ಕಲಿಯುವಿಕೆ ಎಂಬರ್ಥವುಳ್ಳದ್ದಾಗಿ ಪರಸ್ಮೈ ಪದಿ ವರ್ತಮಾನಕಾಲದ ಲಟ್, ಲಕಾರದ ಪ್ರಥಮಪುರುಷ ಬಹುವಚನ ರೂಪದಲ್ಲಿದೆ.

ವಿಶೇಷ---(೧) 'ಘ' ಪ್ರತ್ಯಯವು (ಈಯ) ಬಂದುಇದೆ. (೨) ತೋಯ-ನೀರನ್ನು, ದ-ಕೊಡತಕ್ಕದ್ದು (ಅವ) (೬) 'ಹನ' ಧಾತುವಿಗೆ 'ಆ' ಎಂಬುವ ಉಪಸರ್ಗವು ಸೇರಿ, ಹಕಾರಕ್ಕೆ ಕುತ್ವದಿಂದ ಘಕಾರಾದೇಶವೂ 'ಕ್ತ' ಪ್ರತ್ಯಯವೂ ಬಂತು. (೭) ಇದರಿಂದ ತಾರಕನ ಗಜಗಳು ಲೋಕೋತ್ತರವಾದುವುಗಳೆಂದು ತೋರುವುದು ॥೫೦॥

ಶ್ಲೋ॥ ತದಿಚ್ಛಾಮೋ ವಿಭೋ ಸ್ರಷ್ಟುಂ ಸೇನಾನ್ಯಂ ತಸ್ಯಶಾಂತಯೇ ।
ಕರ್ಮಬಂಧಚ್ಛಿದಂ ಧರ್ಮಂ ಭವಸ್ಯೇವ ಮುಮುಕ್ಷವಃ ॥೫೧॥

ಪದ---(೧) ತತ್ (೨) ಇಚ್ಛಾಮಃ (೩) ವಿಭೋ (೪) ಸ್ರಷ್ಟುಂ (೫) ಸೇನಾನ್ಯಂ (೬) ತಸ್ಯ (೭) ಶಾಂತಯೇ (೮) ಕರ್ಮಬಂಧಚ್ಛಿದಂ (೯) ಧರ್ಮಂ (೧೦) ಭವಸ್ಯ (೧೧) ಇವ (೧೨) ಮುಮುಕ್ಷವಃ.

ಶಬ್ದ---(೧, ೪, ೧೧) ಅವ್ಯ (೨) ಕ್ರಿ (೩) ಉ, ಪು, ಸಂ, ಏ (೫) ಈ, ಪು, ದ್ವಿ, ಏ (೬) ದ, ಪು, ಷ, ಏ (೭) ಇ, ಸ್ತ್ರೀ, ಚ, ಏ (೮) ದ, ಪು, ದ್ವಿ, ಏ (೯) ಅ, ಪು, ದ್ವಿ, ಏ (೧೦) ಅ, ಪು, ಷ, ಏ (೧೨) ಉ, ಪು, ಪ್ರ, ಬ.

ಅನ್ವಯ---ತತ್ ವಿಭೋ (ವಯಂ) ಮುಮುಕ್ಷವಃ ಭವಸ್ಯ ಕರ್ಮಬಂಧಚ್ಛಿದಂ ಧರ್ಮಮಿವ, ತಸ್ಯ ಶಾಂತಯೇ ಸೇನಾನ್ಯಂ ಸ್ರಷ್ಟುಂ ಇಚ್ಛಾಮಃ.

ಅರ್ಥ---ತತ್-ಆದಕಾರಣ, ವಿಭೋ-ಸ್ವಾಮಿಯೇ ! (ವಯಂ-ನಾವು), ಮುಮುಕ್ಷವಃ-ವಿರಕ್ತರು, ಭವಸ್ಯ - ಸಂಸಾರದ, ಶಾಂತಯೇ-ನಾಶಕ್ಕಾಗಿ, ಕರ್ಮ-ಕರ್ಮವೆಂಬ, ಬಂಧ-ಕಟ್ಟನ್ನು, ಛಿದಂ- ಕತ್ತರಿಸುವ,

ಧರ್ಮಮಿವ-ಧರ್ಮವನ್ನೋಪಾದಿಯುಲ್ಲಿ, ತಸ್ಯ - ಆ ತಾರಕನ, ಶಾಂತಯೇ-ನಾಶಕ್ಕೆ, ಸೇನಾನ್ಯಂ-ಸೇನಾಪತಿಯುನ್ನು, ಸ್ರಷ್ಟುಂ-ಸೃಷ್ಟಿಸುವುದಕ್ಕೆ, ಇಚ್ಛಾಮಃ-ಅಪೇಕ್ಷಿಸುತ್ತೇವೆ.

ತಾ॥ ಎಲೈ ಬ್ರಹ್ಮನೇ! ಮುಕ್ತಿಯುನ್ನು ಪಡೆಯುಲಪೇಕ್ಷೆಯುಳ್ಳ ವಿರಕ್ತರು ಜ್ಞಾನಾರ್ಜನೆಯುನ್ನು ಮಾಡುವುದಕ್ಕಾಗಿ, ಸಂಸಾರ ಬಂಧವನ್ನು ಬಿಡಿಸುವ ಧರ್ಮವನ್ನಪೇಕ್ಷಿಸುವಂತೆ ನಾವು ಆ ತಾರಕನ ಸಂಹಾರಕ್ಕಾಗಿ ಸಮರ್ಥನಾದ ಸೇನಾಪತಿಯೊಬ್ಬನನ್ನು ಸೃಷ್ಟಿಸಲಿಚ್ಛೈಸುತ್ತೇವೆ.

ಆಕಾಂಕ್ಷೆ---ಇಚ್ಛಾಮಃ, ಕೇ ? (ವಯಂ) ಕಂ ? ಸೇನಾನ್ಯಂ (ಸ, ಪ್ರ) ಕಿಂಕರ್ತುಂ ? ಸ್ರಷ್ಟುಂ, ಕಸ್ಯೈ ? ಶಾಂತಯೇ, ಕಸ್ಯ ? ತಸ್ಯ, ಕಮಿವ ? ಧರ್ಮಮಿವ, ಕಸ್ಯೈ ? ಶಾಂತಯೇ, ಕಸ್ಯ ? ಭವಸ್ಯ, ಕಥಂಭೂತಂ ಧರ್ಮಂ ? ಕರ್ಮಬಂಧಚ್ಛಿದಂ, ಕೇ ? ಮುಮುಕ್ಷವಃ, ಕಥಂಭೂತ ? ವಿಭೋಃ, ಯತ್ ? ತತ್.

ವಿಗ್ರಹ—(೮) ಕರ್ಮೈವಬಂಧಃ-ಕರ್ಮಬಂಧಃ [ಅವ, ಪೂರ್ವ, ಕ] ಕರ್ಮಬಂಧಂ ಛಿನತ್ತೀತಿ-ಕರ್ಮಬಂಧಚ್ಛಿತ್ (ಕೃ, ವೃ) + ತಂ.

ಧಾತುರೂಪ---(೨) ಇಚ್ಛತಿ, ಇಚ್ಛತಃ, ಇಚ್ಛಂತಿ,
ಇಚ್ಛಸಿ, ಇಚ್ಛಥಃ, ಇಚ್ಛಥ,
ಇಚ್ಛಾಮಿ, ಇಚ್ಛಾವಃ, ಇಚ್ಛಾಮಃ,

ಧಾತ್ವರ್ಥ---(ಇಷ-ಇಚ್ಛಾಯಾಂ) ಅಪೇಕ್ಷಿಸುವಿಕೆ, ಎಂಬರ್ಥವುಳ್ಳ ' ತುದಾದಿ ' ಆರನೆಯ ಗಣದ ' ಇಷ ' ಎಂಬ ಧಾತುವು ಪರಸ್ಮೈಪದ, ಲಟ್, ಲಕಾರದ ವರ್ತಮಾನಕಾಲದ ಉತ್ತಮಪುರುಷಬಹುವಚನ ರೂಪದಲ್ಲಿದೆ.

ವಿಶೇಷ---(೪) ' ಸೃಜ್ ' ಧಾತುವಿಗೆ ' ತುಮುನ್ ' ಎಂಬ ಪ್ರತ್ಯಯುವು ಸೇರಿ ಧಾತುವಿನ ಜಕಾರಕ್ಕೆ ಷಕಾರವೂ, ಪ್ರತ್ಯಯ ತಕಾರಕ್ಕೆ ಷ್ಟುತ್ವದಿಂದ ಟಕಾರಾದೇಶವೂ ಬಂದಿದೆ. (೫) ಸೇನಾಂನಯತಿ-ಇತಿ ಸೇನಾನೀಃ (ಸೇನೆಯುನ್ನು ನಡೆಯಿಸತಕ್ಕವನು) (ಕೃ, ವೃ) ಕ್ವಿಪ್ ಪ್ರತ್ಯಯುವು ಬಂದು ಎಲ್ಲ ಅಕ್ಷರಗಳೂ ಲೋಪವನ್ನು ಹೊಂದಿದೆ. (೩) ' ಶಮು ' ಧಾತುವಿಗೆ ' ಕ್ತಿನ್ ' ಪ್ರತ್ಯಯವು ಬಂದಿದೆ. (೮) ' ತಮೋ

ವವಿದಿತ್ವಾ ಅತಿಮೃತ್ಯುಮೇತಿ ' ಎಂಬ ಶ್ರುತಿವಚನಾನುಸಾರವಾಗಿ ಜ್ಞಾನವನ್ನು ಸಂಪಾದಿಸುವುದರಿಂದಲೇ ಸಂಸಾರಬಂಧವು ನಾಶವಾಗುವುದು. ಆದಕಾರಣ ಆತ್ಮಜ್ಞಾನವೇ ಕರ್ಮಬಂಧವನ್ನು ನಾಶಪಡಿಸುವುದೆಂದು ತಿಳಿಯಬೇಕು. (೯) ಧರ್ಮ-ಧರ್ಮರಾಜ, ಯಮ, ಪುರುಷಾರ್ಥ, ನ್ಯಾಯ, ಧನುಸ್ಸು (ನಾನಾ) (೧೦) ಸಂಸಾರ, ಈಶ್ವರ (ನಾನಾ) (೧೨) ಮೋಕ್ತುಂ ಇಚ್ಛವಃ-ಮುಮುಕ್ಷವಃ (ಕೃ, ವೃ) ಸನ್ ಪ್ರತ್ಯಯವೂ, ಉ ಪ್ರತ್ಯಯವೂ ಬಂದಿದೆ. ಈ ಶ್ಲೋಕದಲ್ಲಿ ' ಮುಮುಕ್ಷುಗಳು ಕರ್ಮಬಂಧದ ನಾಶಕ್ಕಾಗಿ ಜ್ಞಾನವನ್ನಪೇಕ್ಷಿಸುವಂತೆ, ನಾವು ಈ ತಾರಕನ ನಾಶಕ್ಕಾಗಿ ತಕ್ಕ ಸೇನಾಪತಿಯನ್ನಪೇಕ್ಷಿಸುತ್ತೇವೆ ' ಎಂಬ ವಾಕ್ಯಾರ್ಥದಿಂದ ಉಪಮೆಯು ತೋರಿಬರುವುದರಿಂದ ಪೂರ್ಣೋಪಮಾಲಂಕಾರವು ॥೫೧॥

ಶ್ಲೋ॥ ಗೋಪ್ತಾರಂ ಸುರಸೈನ್ಯಾನಾಂ ಯಂ ಪುರಸ್ಕೃತ್ಯ ಗೋತ್ರಭಿತ್ । ಪ್ರತ್ಯಾನೇಷ್ಯತಿ ಶತ್ರುಭ್ಯೋ ಬಂದೀಮಿವ ಜಯಶ್ರಿಯಂ ॥೫೨॥

ಪದ---(೧) ಗೋಪ್ತಾರಂ (೨) ಸುರಸೈನ್ಯಾನಾಂ (೩) ಯಂ [೪] ಪುರಸ್ಕೃತ್ಯ (೫) ಗೋತ್ರಭಿತ್ (೬) ಪ್ರತ್ಯಾನೇಷ್ಯತಿ (೭) ಶತ್ರುಭ್ಯಃ (೮) ಬಂದೀಂ (೯) ಇವ (೧೦) ಜಯಶ್ರಿಯಂ.

ಶಬ್ದ---ಋ, ಪು, ದ್ವಿ, ಏ (೨) ಅ, ನ, ಷ, ಬ (೩) ದ, ಪು, ದ್ವಿ ಏ (೪, ೯) ಅವ್ಯ (೫) ದ, ಪು, ಪ್ರ, ಏ (೬) ಕ್ರಿ (೭) ಉ, ಪು, ಪಂ, ಬ (೮, ೧೦) ಈ, ಸ್ತ್ರೀ, ದ್ವಿ, ಏ.

ಅನ್ವಯ---ಗೋತ್ರಭಿತ್, ಸುರಸೈನ್ಯಾನಾಂಯಂ ಗೋಪ್ತಾರಂ ಪುರಸ್ಕೃತ್ಯ ಬಂದೀಮಿವಶ್ರಿಯಂ ಶತ್ರುಭ್ಯಃ ಪ್ರತ್ಯಾನೇಷ್ಯತಿ.

ಅರ್ಥ---ಗೋತ್ರಭಿತ್-ಇಂದ್ರನು, ಯಂ-ಯಾರನ್ನು, ಸುರ-ದೇವತೆಗಳ, ಸೈನ್ಯಾನಾಂ-ಸೇನೆಗಳಿಗೆ, ಗೋಪ್ತಾರಂ-ರಕ್ಷಕನನ್ನಾಗಿ, ಪುರಸ್ಕೃತ್ಯ-ಮುಂದುಮಾಡಿ, ಬಂದೀಮಿವ-ಸೆರೆಯಲ್ಲಿದ್ದವಳನ್ನೋಪಾದಿಯಲ್ಲಿ, ಜಯ-ಗೆಲುವೆಂಬ, ಶ್ರಿಯಂ-ಸಿರಿಯನ್ನು, ಶತ್ರುಭ್ಯಃ-ಶತ್ರುಗಳಾದ ರಾಕ್ಷಸರಿಂದ, ಪ್ರತ್ಯಾನೇಷ್ಯತಿ-ಹಿಂದಿರುಗಿಸಿಕೊಂಡು ಬರುವನೋ.

ತಾತ್ಪರ್ಯ—ಇಂದ್ರನು ಯಾವ ಸೇನಾಪತಿಯನ್ನು ಮುಂದುಮಾಡಿಕೊಂಡು ಹೋದರೆ ಶತ್ರುಹಸ್ತಗತವಾದ ಗೆಲುವೆಂಬ ಐಶ್ವರ್ಯವನ್ನು ಕಾರಾಗಾರದಿಂದ ಬಿಡಿಸಿಕೊಂಡು ಬಂದಂತೆ ಅಪಹರಿಸಿಕೊಂಡು ಬರಲು ಸಮರ್ಥನಾಗುವನೋ (ಅಂತಹ ಸೇನಾಪತಿಯನ್ನುನಾವು ಕೋರುವೆವು)

ಆಕಾಂಕ್ಷೆ —ಪ್ರತ್ಯಾನೇಷ್ಯತಿ, ಕಃ ? ಗೋತ್ರಭಿತ್, ಕಾಂ ? ಶ್ರಿಯಂ (ಸ,ಪ್ರ) ಕೇಭ್ಯಃ ? ಶತ್ರುಭ್ಯಃ, ಕಾಮಿವ ? ಬಂದೀಮಿವ, ಕಿಂಕೃತ್ವಾ ? ಪುರಸ್ಕೃತ್ಯ, ಕಂ? ಯಂ. ಕಥಂಭೂತಂ? ಗೋಪ್ತಾರಂ, ಕೇಷಾಂ ? ಸುರಸೈನ್ಯಾನಾಂ.

ವಿಗ್ರಹ—(೨) ಸುರಾಣಾಂ ಸೈನ್ಯಾನಿ-ಸುರಸೈನ್ಯಾನಿ (ಷ,ತ) + ತೇಷಾಂ (೫) ಗೋತ್ರಾನ್ ಭಿನತ್ತೀತಿ-ಗೋತ್ರಭಿತ್ (ಕೃ, ವೃ) (೧೦) ಜಯಇತಿಶ್ರೀಃ-ಜಯಶ್ರೀಃ (ಅವ, ಪೂರ್ವ, ಕ) + ತಾಂ.

ಧಾತುರೂಪ—(೬)

ಪ್ರತ್ಯಾನೇಷ್ಯತಿ, ಪ್ರತ್ಯಾನೇಷ್ಯತಃ, ಪ್ರತ್ಯಾನೇಷ್ಯಂತಿ,
ಪ್ರತ್ಯಾನೇಷ್ಯಸಿ, ಪ್ರತ್ಯಾನೇಷ್ಯಥಃ, ಪ್ರತ್ಯಾನೇಷ್ಯಥ;
ಪ್ರತ್ಯಾನೇಷ್ಯಾಮಿ, ಪ್ರತ್ಯಾನೇಷ್ಯಾವಃ, ಪ್ರತ್ಯಾನೇಷ್ಯಾಮಃ,

ಧಾತ್ವರ್ಥ—(ಣೀಞ್-ಪ್ರಾಪಣೇ) ಒಯ್ಯುವಿಕೆ, ಎಂಬರ್ಥವುಳ್ಳ ‹ ಭ್ವಾದಿ › ಬಾದನೆಯ ಗಣದ ಉಭಯಪದಿ, ದ್ವಿಕರ್ಮಕ ‹ ಣೀಞ್ › ಎಂಬ ಧಾತುವಿಗೆ, ಪ್ರತಿ ‹ ಆ › ಎಂಬುಪಸರ್ಗಗಳು ಸೇರಿ ‹ ಪುನಃ ತೆಗೆದುಕೊಂಡು ಬರುವುದು › ಎಂಬರ್ಥ ವುಳ್ಳದ್ದಾಗಿ ಪರಸ್ಮೈಪದಿ ‹ ಲೃಟ್ › ಲಕಾರದ ಭವಿಷ್ಯತ್ಕಾಲದ ಪ್ರಥಮಪುರುಷೈಕ ವಚನವಲ್ಲಿದೆ.

ವಿಶೇಷ—(೧) ‹ ಗುಪೂ › ಧಾತುವಿಗೆ ಕರ್ತ್ರರ್ಥದಲ್ಲಿ ‹ ತೃ › ಪ್ರತ್ಯಯವು ಸೇರಿದೆ. ಗೋಪಾಯತೀತಿ-ಗೋಪ್ತಾ (ಕೃ, ವೃ) ( ೪ ) ಅವ್ಯಯವಾದ ಪುರಃ ಶಬ್ದಕ್ಕೆ ‹ ಗತಿ › ಸಂಜ್ಞೆ ಬಂದಿದೆ. ಗತಿಸಂಜ್ಞೆಯುಳ್ಳ ಪುರಃ ಶಬ್ದದ ವಿಸರ್ಗಕ್ಕೆ ಸಕಾರವು ಆದೇಶವಾಗಿ ಬಂದಿದೆ. ಪುರಸ್ಕೃ + ಯ ‹ ಲ್ಯಪ್ › ಪ್ರತ್ಯಯವೂ, ಮಧ್ಯದಲ್ಲಿ ತುಗಾಗಮವೂ ಬಂದು ‹ ಪುರಸ್ಕೃತ್ಯ › ಎಂದಾಯ್ತು. (೫) ‹ ಕ್ವಿಪ್ › ಪ್ರತ್ಯಯಾಂತಕವಾದ ಕೃದಂತವು. (೬) ಅಪಾದಾನಾರ್ಥದಲ್ಲಿ ಪಂಚಮಿ, ಈ ಶ್ಲೋಕ

ದಲ್ಲಿ ' ಜಯಲಕ್ಷ್ಮಿಯನ್ನು ಸೆರೆಯಲ್ಲಿದ್ದವಳಂತೆ ಬಿಡಿಸಿಕೊಂಡು ಬರುತ್ತಾನೆಂಬ, ವಾಕ್ಯಾರ್ಥದಿಂದ ಜಯಲಕ್ಷ್ಮಿಯನ್ನು ಸೆರೆಯಲ್ಲಿದ್ದವಳಿಗೆ ಹೋಲಿಸಿರುವುದರಿಂದ ಉಪಮಾಲಂಕಾರವು ||೫೨||

ಶ್ಲೋ|| ವಚಸ್ಯವಸಿತೇ ತಸ್ಮಿನ್ ಸಸರ್ಜ ಗಿರ ಮಾತ್ಮಭೂಃ ।
ಗರ್ಜಿತಾನಂತರಾಂ ವೃಷ್ಟಿಂ ಸೌಭಾಗ್ಯೇನ ಜಿಗಾಯ ಸಾ||೫೩||

ಪದ---(೧) ವಚಸಿ (೨) ಅವಸಿತೇ (೩) ತಸ್ಮಿನ್ (೪) ಸಸರ್ಜ (೫) ಗಿರಂ (೬) ಆತ್ಮಭೂಃ (೭) ಗರ್ಜಿತಾನಂತರಾಂ (೮) ವೃಷ್ಟಿಂ (೯) ಸೌಭಾಗ್ಯೇನ (೧೦) ಜಿಗಾಯ (೧೧) ಸಾ.

ಶಬ್ದ---(೧) ಸ,ನ,ಸ,ಏ (೨) ಅ, ನ, ಸ, ಏ (೩) ದ, ನ, ಸ, ಏ (೪, ೧೦) ಕ್ರಿ (೫) ರ, ಸ್ತ್ರೀ, ದ್ವಿ, ಏ (೬) ಊ, ಪು, ಪ್ರ, ಏ (೭) ಆ, ಸ್ತ್ರೀ, ದ್ವಿ, ಏ (೮) ಇ, ಸ್ತ್ರೀ, ದ್ವಿ, ಏ (೯) ಅ, ನ, ತೃ, ಏ (೧೧) ದ, ಸ್ತ್ರೀ, ಪ್ರ. ಏ

ಅನ್ವಯ---ತಸ್ಮಿನ್ ವಚಸಿ ಅವಸಿತೇ ಆತ್ಮಭೂಃ ಗಿರಂ ಸಸರ್ಜ ಸಾ ಸೌಭಾಗ್ಯೇನ ಗರ್ಜಿತಾನಂತರಾಂ ವೃಷ್ಟಿಂಜಿಗಾಯ.

ಅರ್ಥ---ತಸ್ಮಿನ್-ಆ, ವಚಸಿ - ಬೃಹಸ್ಪತಿಯ ಮಾತು, ಅವಸಿತೇ ಸತಿ-ಮುಗಿಯುತ್ತಿರಲಾಗಿ, ಆತ್ಮಭೂಃ-ಬ್ರಹ್ಮನು, ಗಿರಂ - ಮಾತನ್ನು, ವಿಸಸರ್ಜ-ಆಡಿದನು. ಸಾ-ಆ ಮಾತು, ಸೌಭಾಗ್ಯೇನ-ಮನೋಹರತ್ವದಿಂದ, ಗರ್ಜಿತ-ಗುಡುಗಿನ, ಅನಂತರಾಂ - ತರುವಾಯದಲ್ಲಿ ಪ್ರಾರಂಭವಾದ, ವೃಷ್ಟಿಂ-ಮಳೆಯನ್ನು, ಜಿಗಾಯ-ಜಯಿಸಿತು.

ತಾತ್ಪರ್ಯ---ದೇವಗುರುವಾದ ಬೃಹಸ್ಪತಿಯು ಆಡಿದ ಮಾತು ಪೂರಯಿಸಿದಕೂಡಲೆ ಬ್ರಹ್ಮನು ಗುಡುಗಿದಮೇಲೆ ಸುಗಿಚಲೇ ಮಳೆ ಹುಯ್ಯುವಂತೆ ಪ್ರತ್ಯುತ್ತರರೂಪವಾದ ಮಾತನ್ನು ಹೇಳಿದನು.

ಆಕಾಂಕ್ಷೆ—ಜಿಗಾಯ, ಕಾ ? ಸಾ, ಕಾಂ? ವೃಷ್ಟಿಂ (ಸ,ಪ್ರ) ಕೇನ ಸೌಭಾಗ್ಯೇನ, ಕಥಂಭೂತಾಂ ವೃಷ್ಟಿಂ? ಗರ್ಜಿತಾನಂತರಾಂ, ಸಸರ್ಜ, ಕಃ ? ಆತ್ಮಭೂಃ, ಕಾಂ ? ಗಿರಂ (ಸ, ಪ್ರ) ಕಥಂಭೂತೇ ಸತಿ, ಅವಸಿತೇಸತಿ, ಕಸ್ಮಿನ್ ? ವಚಸಿ, ಕಥಂಭೂತೇವಚಸಿ ? ತಸ್ಮಿನ್.

ವಿಗ್ರಹ—(೬) ಆತ್ಮನಿ ಭವತೀತಿ-ಆತ್ಮಭೂಃ (ಸ,ತ) (೭) ಗರ್ಜಿತಾತ್ ಅನಂತರಾ-ಗರ್ಜಿತಾನಂತರಾ (ಪಂ,ತ) + ತಾಂ.

ಧಾತುರೂಪ---(೪) ಸಸರ್ಜ, ಸಸೃಜತುಃ, ಸಸೃಜುಃ,
ಸಸ್ರಷ್ಠ, ಸಸೃಜಥುಃ, ಸಸೃಜ,
ಸಸರ್ಜ, ಸಸೃಜಿವ, ಸಸೃಜಿಮ,

ಧಾತ್ವರ್ಥ---(ಸೃಜ-ವಿಸರ್ಗೇ) ವಿಸರ್ಜಿಸುವಿಕೆ, ಎಂಬರ್ಥವುಳ್ಳ ತುದಾದಿ, ಆರನೆಯ ಗಣದ ‹ ಸೃಜ › ಎಂಬ ಪರಸ್ಮೈಪದಿ ಧಾತುವು ಲಿಟ್, ಲಕಾರದ ಭೂತಕಾಲದ ಪ್ರಥಮಪುರುಷೈಕ ವಚನದಲ್ಲಿದೆ.

ಧಾತುರೂಪ—(೧೦) ಜಿಗಾಯ, ಜಿಗ್ಯತುಃ, ಜಿಗ್ಯುಃ,
ಜಿಗಯಿಥ, ಜಿಗೇಥ, } ಜಿಗ್ಯಥುಃ, ಜಿಗ್ಯ,
ಜಿಗಾಯ, ಜಿಗಯ, } ಜಿಗ್ಯಿವ, ಜಿಗ್ಯಿಮ,

ಧಾತ್ವರ್ಥ---(ಜಿ-ಜಯೇ) ಗೆಲ್ಲುವಿಕೆ, ಎಂಬರ್ಥವುಳ್ಳ ‹ ಭ್ವಾದಿ › ಒಂದನೆಯ ಗಣದ ಉಭಯಪದಿ ‹ ಜಿ › ಎಂಬ ಧಾತುವು ಪರಸ್ಮೈಪದದ ಲಿಟ್ ಲಕಾರದ ಭೂತರೂಪದ ಪ್ರಥಮಪುರುಷೈಕ ವಚನದಲ್ಲಿದೆ.

ವಿಶೇಷ---(೨) ಮುಗಿಸುವಿಕೆ, ಎಂಬರ್ಥವುಳ್ಳ ‹ ಷೋ › ಎಂಬ ಧಾತುವಿಗೆ ಕರ್ಮಾರ್ಥದಲ್ಲಿ ‹ ಕ್ತ › ಎಂಬ ಪ್ರತ್ಯಯವೂ, ‹ ಅವ › ಎಂಬುಪಸರ್ಗವೂ ಸೇರಿದೆ. ಧಾತುವಿನ ಷಕಾರಕ್ಕೆ ಸಕಾರವೂ, ಪ್ರತ್ಯಯಕ್ಕೆ ‹ ಇಟ್ › ಎಂಬಾಗಮವೂ ಬಂದಿದೆ (೮) ‹ ವೃಷ್ › ಧಾತುವಿಗೆ ‹ ಕ್ತಿ › ಎಂಬ ಪ್ರತ್ಯಯವು ಪರವಾಗಿ ಪ್ರತ್ಯಯದ ತಕಾರಕ್ಕೆ ‹ ಷ್ಟುತ್ವ › ದಿಂದ ಟಕಾರಾದೇಶವು ಬಂತು. (೯) ‹ ಸುಭಗ › ಎಂಬ ಶಬ್ದದಮೇಲೆ ಭಾವಾರ್ಥದಲ್ಲಿ ‹ ಯತ್ › ಪ್ರತ್ಯಯವು ಸೇರಿದೆ ಸುಭಗಸ್ಯಭಾವಃ-ಸೌಭಾಗ್ಯಂ (ತ, ವೃ) ಭಗಶಬ್ದವು ಕೊನೆಯಲ್ಲಿರುವುದರಿಂದ ಪೂರ್ವಶಬ್ದವಾದ, ಸು, ಎಂಬುದಕ್ಕೂ ವೃದ್ಧಿಬಂದಿದೆ. ಈ ಶ್ಲೋಕದಲ್ಲಿ 'ಗುರುವು ನುಡಿದ ಮಾತುಗಳು ಮುಗಿದಕೂಡಲೆ ಬ್ರಹ್ಮನು ಉತ್ತರವನ್ನು ಹೇಳಿದನೆಂಬ ವಸ್ತುವನ್ನು, ಗುಡುಗು ಪೂರಯಿಸಿದ ಕೂಡಲೇ ಮಳೆಯು

ಪ್ರಾರಂಭವಾದಂತೆಯೋ ' ಎನ್ನುವಹಾಗೆ ಉತ್ಪ್ರೇಕ್ಷೆ ಮಾಡಿರುವುದರಿಂದ ಉಕ್ತವಸ್ತೂತ್ಪ್ರೇಕ್ಷಾಲಂಕಾರವು ॥೫೬॥

ಶ್ಲೋ॥ಸಂಪತ್ಸ್ಯತೇವಃ ಕಾಮೋಽಯಂ ಕಾಲಃ ಕಶ್ಚಿತ್ಪ್ರತೀಕ್ಷ್ಯತಾಂ।
ನತ್ವಸ್ಯ ಸಿದ್ಧೌ ಯಾಸ್ಯಾಮಿ ಸರ್ಗವ್ಯಾಪಾರಮಾತ್ಮನಾ ॥೫೪॥

ಪದ—(೧) ಸಂಪತ್ಸ್ಯತೇ (೨) ವಃ (೩) ಕಾಮಃ (೪) ಅಯಂ (೫) ಕಾಲಃ (೬) ಕಶ್ಚಿತ್ (೭) ಪ್ರತೀಕ್ಷ್ಯತಾಂ (೮) ನ (೯) ತು (೧೦) ಅಸ್ಯ (೧೧) ಸಿದ್ಧೌ (೧೨) ಯಾಸ್ಯಾಮಿ (೧೩) ಸರ್ಗವ್ಯಾಪಾರಂ (೧೪) ಆತ್ಮನಾ.

ಶಬ್ದ—(೧,೭,೧೨) ಕ್ರಿ (೨) ದ,ಪು,ಷ,ಬ (೩,೫) ಅ,ಪು,ಪ್ರ, ಏ (೪) ಮ,ಪು,ಪ್ರ ಏ (೬,೮,೯) ಅವ್ಯ (೧೦) ದ,ಪು ಷ,ಏ(೧೧) ಇ, ಸ್ತ್ರೀ, ಸ,ಏ (೧೩) ಅ,ಪು,ದ್ವಿ,ಏ (೧೪) ನ,ಪು,ತೃ,ಏ.

ಅನ್ವಯ—(ಭವದ್ಭಿಃ) ಅಯಂವಃ ಕಾಮಃ ಸಂಪತ್ಸ್ಯತೇ, ಕಶ್ಚಿತ್‌ಕಾಲಃ ಪ್ರತೀಕ್ಷ್ಯತಾಂ, ಅಸ್ಯಸಿದ್ಧೌತು ಆತ್ಮನಾ ಸರ್ಗವ್ಯಾಪಾರಂ ನಯಾಸ್ಯಾಮಿ.

ಅರ್ಥ—(ಭವದ್ಭಿಃ-ನಿಮ್ಮಗಳಿಂದ) ಅಯಂ - ಈ, ವಃ - ನಿಮ್ಮ, ಕಾಮಃ-ಇಷ್ಟಾರ್ಥವು, ಸಂಪತ್ಸ್ಯತೇ-ಹೊಂದಲ್ಪಡುತ್ತದೆ. ಕಶ್ಚಿತ್-ಕೆಲವು, ಕಾಲಃ-ಕಾಲವು, ಪ್ರತೀಕ್ಷ್ಯತಾಂ-ನಿರೀಕ್ಷಿಸಲ್ಪಡಲಿ, ಅಸ್ಯ-ಈ ಕಾರ್ಯದ, ಸಿದ್ಧೌತು-ಸಿದ್ಧಿವಿಷಯದಲ್ಲಿಯಾದರೋ, ಆತ್ಮನಾ-ನನ್ನಿಂದ, ಸರ್ಗ-ಸೃಷ್ಟಿಯ, ವ್ಯಾಪಾರಂ-ಕಾರ್ಯವನ್ನು, ನಯಾಸ್ಯಾಮಿ-ನಾನು ಹೊಂದುವುದಿಲ್ಲ.

ತಾತ್ಪರ್ಯ---ಎಲೈ ದೇವತೆಗಳಿರಾ ! ನೀವು ಸ್ವಲ್ಪಕಾಲ ನಿರೀಕ್ಷಣೆ ಮಾಡುತ್ತಿರಿ, ನಿಮ್ಮ ಕೋರಿಕೆಯು ನೆರವೇರುವುದು. ಈ ಸೇನಾಪತಿಯ ಉತ್ಪತ್ತಿಗಾಗಿ ನಾನು ನನ್ನ ಸೃಷ್ಟಿವ್ಯಾಪಾರವನ್ನು ವಹಿಸಬೇಕಾದುದಿಲ್ಲ.

ಆಕಾಂಕ್ಷೆ---ನಯಾಸ್ಯಾಮಿ, ಕಃ ? (ಅಹಂ) ಕಂ ? ಸರ್ಗವ್ಯಾಪಾರಂ (ಸ,ಪ್ರ) ಕೇನ ? ಆತ್ಮನಾ, ಕಸ್ಯಾಂತು ? ಸಿದ್ಧೌತು, ಕಸ್ಯ ? ಅಸ್ಯ, ಪ್ರತೀಕ್ಷ್ಯತಾಂ, ಕೈಃ ? [ಭವದ್ಭಿಃ] ಕಃ ? ಕಾಲಃ (ಕರ್ಮ,ಪ್ರ)

ಕಥಂಭೂತಃ ಕಾಲಃ? ಕಶ್ಚಿತ್, ಸಂಪತ್ಸ್ಯತೇ, ಕೈಃ? [ಭವದ್ಭಿಃ] ಕಃ? ಕಾಮಃ (ಕರ್ಮ,ಪ್ರ) ಕೇಷಾಂ? ವಃ, ಕಥಂಭೂತಃ ಕಾಮಃ? ಅಯಂ.

ವಿಗ್ರಹ-(೧೩) ಸರ್ಗಸ್ಯವ್ಯಾಪಾರಃ-ಸರ್ಗವ್ಯಾಪಾರಃ(ಷ,ತ) + ತಂ.

ಧಾತುರೂಪ---(೧) ಸಂಪತ್ಸ್ಯತೇ, ಸಂಪತ್ಸ್ಯೇತೇ ಸಂಪತ್ಸ್ಯಂತೇ,
ಸಂಪತ್ಸ್ಯಸೇ, ಸಂಪತ್ಸ್ಯೇಥೇ, ಸಂಪತ್ಸ್ಯಧ್ವೇ,
ಸಂಪತ್ಸ್ಯೇ. ಸಂಪತ್ಸ್ಯಾವಹೇ, ಸಂಪತ್ಸ್ಯಾಮಹೇ.

ಧಾತ್ವರ್ಥ---[ಪದ-ಗತೌ] ಹೊಂದುವಿಕೆ, ಎಂಬರ್ಥವುಳ್ಳ ‹ ದಿವಾದಿ , ನಾಲ್ಕನೆಯ ಗಣದ ‹ ಪದ , ಎಂಬ ಆತ್ಮನೇಪದ ಧಾತುವಿಕೆ ‹ ಸಮ್ , ಎಂಬುಪಸರ್ಗವು ಸೇರಿ, ಕರ್ಮಾರ್ಥದ ‹ ಲೃಟ್ , ಲಕಾರದ ಭವಿಷ್ಯದ್ರೂಪದ ಪ್ರಥಮಪುರುಷೈಕ ವಚನರೂಪವಾಗಿದೆ.

ಧಾತುರೂಪ --[೨]
ಪ್ರತೀಕ್ಷ್ಯತಾಂ, ಪ್ರತೀಕ್ಷ್ಯೇತಾಂ, ಪ್ರತೀಕ್ಷ್ಯಂತಾಂ,
ಪ್ರತೀಕ್ಷ್ಯಸ್ವ, ಪ್ರತೀಕ್ಷ್ಯೇಥಾಂ, ಪ್ರತೀಕ್ಷ್ಯಧ್ವಂ,
ಪ್ರತೀಕ್ಷ್ಯೈ, ಪ್ರತೀಕ್ಷ್ಯಾವಹೈ, ಪ್ರತೀಕ್ಷ್ಯಾಮಹೈ,

ಧಾತ್ವರ್ಥ---( ಈಕ್ಷ-ದರ್ಶನೇ ) ನೋಡುವಿಕೆ, ಎಂಬರ್ಥವುಳ್ಳ ‹ ಭ್ವಾದಿ , ೧ನೆಯ ಗಣದ ಆತ್ಮನೇಪದಿ ‹ ಈಕ್ಷ , ಧಾತುವಿಗೆ ‹ ಪ್ರತಿ , ಎಂಬ ಉಪಸರ್ಗವು ಸೇರಿ ‹ ನಿರೀಕ್ಷಿಸುವಿಕೆ , ಎಂಬರ್ಥವುಳ್ಳುದಾಗಿ ಕರ್ಮಾರ್ಥದಲ್ಲಿ ಆಜ್ಞಾರ್ಥದ ‹ ಲೋಟ್ , ಲಕಾರದ ಪ್ರಥಮಪುರುಷದ ಏಕವಚನ ರೂಪವಾಗಿದೆ.

ಧಾತುರೂಪ---(೧೨) ಯಾಸ್ಯತಿ, ಯಾಸ್ಯತಃ, ಯಾಸ್ಯಂತಿ,
ಯಾಸ್ಯಸಿ, ಯಾಸ್ಯಥಃ, ಯಾಸ್ಯಥ,
ಯಾಸ್ಯಾಮಿ, ಯಾಸ್ಯಾವಃ, ಯಾಸ್ಯಾಮಃ

ಧಾತ್ವರ್ಥ---[ಯಾ-ಪ್ರಾಪಣೇ] ಹೋಗುವಿಕೆ, ಎಂಬರ್ಥವುಳ್ಳ ‹ ಅದಾದಿ , ಎರಡನೆಯ ಗಣದ ‹ ಯಾ , ಎಂಬ ಪರಸ್ಮೈಪದಿ ಧಾತುವು ‹ ಲೃಟ್ , ಲಕಾರದ ಭವಿಷ್ಯತ್ಕಾಲದ ಉತ್ತಮಪುರುಷೈಕ ವಚನರೂಪದಲ್ಲಿದೆ.

ವಿಶೇಷ—(೩) ಕಾಮ= ಮನ್ಮಥ, ಇಷ್ಟಾರ್ಥ, ಪುರುಷಾರ್ಥಗಳಲ್ಲಿ ಒಂದು. (೫) ಕಾಲ= ಸಮಯ, ಯಮ, ಕಪ್ಪುಬಣ್ಣ. (೧೧) ಗತ್ಯರ್ಥಕವಾದ ' ಷಿಧ ', ಧಾತುವಿಗೆ ಭಾವಾರ್ಥದಲ್ಲಿ ಸ್ತ್ರೀಲಿಂಗದಲ್ಲಿ ' ಕ್ತಿನ್ ', ಪ್ರತ್ಯಯವು ಸೇರಿ, ಧಾತುವಿನ ಷಕಾರಕ್ಕೆ ಸಕಾರಾದೇಶವೂ ಇತ್ತ್ವವೂ ಬಂದಿದೆ. ಇಲ್ಲಿ ವಿಷಯಸಪ್ತಮಿ ॥೫೪॥

ಶ್ಲೋ॥ ಇತಸ್ಸದೈತ್ಯಃ ಪ್ರಾಪ್ತಶ್ರೀ ರ್ನೇತ ಏವಾರ್ಹತಿ ಕ್ಷಯಂ ।
ವಿಷವೃಕ್ಷೋಽಪಿ ಸಂವರ್ಧ್ಯ ಸ್ವಯಂ ಛೇತ್ತು ಮಸಾಂಪ್ರತಂ ॥

ಪದ—(೧) ಇತಃ (೨) ಸಃ (೩) ದೈತ್ಯಃ (೪) ಪ್ರಾಪ್ತಶ್ರೀಃ (೫) ನ (೬) ಇತಃ (೭) ಏವ (೮) ಅರ್ಹತಿ [೯] ಕ್ಷಯಂ (೧೦) ವಿಷವೃಕ್ಷಃ (೧೧) ಅಪಿ (೧೨) ಸಂವರ್ಧ್ಯ (೧೩) ಸ್ವಯಂ (೧೪) ಛೇತ್ತುಂ (೧೫) ಅಸಾಂಪ್ರತಂ.

ಶಬ್ದ—(೧,೫,೬,೭,೧೧,೧೨,೧೩,೧೪,೧೫) ಅವ್ಯ (೨) ದ, ಪು, ಪ್ರ, ಏ (೩,೧೦) ಅ, ಪು, ಪ್ರ, ಏ (೪) ಈ, ಪು, ಪ್ರ, ಏ (೮) ಕ್ರಿ (೯) ಅ, ಪು, ದ್ವಿ, ಏ.

ಅನ್ವಯ — ಇತಃ ಪ್ರಾಪ್ತಶ್ರೀಃ ಸಃ ದೈತ್ಯಃ ಇತಏವ ಕ್ಷಯಂ ನಾರ್ಹತಿ,ವಿಷವೃಕ್ಷೋಽಪಿ ಸಂವರ್ಧ್ಯ ಸ್ವಯಂ ಛೇತ್ತುಂ,ಅಸಾಂಪ್ರತಂ.

ಅರ್ಥ—ಇತಃ-ನನ್ನ ದೆಸೆಯಿಂದ, ಪ್ರಾಪ್ತ - ಸಂಪಾದಿಸಲ್ಪಟ್ಟ, ಶ್ರೀಃ ಅಭ್ಯುದಯವುಳ್ಳ, ಸಃ-ಆ, ದೈತ್ಯಃ-ರಾಕ್ಷಸನು, ಇತ ಏವ - ನನ್ನ ದೆಸೆಯಿಂದಲೇ, ಕ್ಷಯಂ-ನಾಶವನ್ನು, ನಾರ್ಹತಿ-ಹೊಂದಲಾಗದು. ವಿಷವೃಕ್ಷೋಽಪಿ-ವಿಷದ ಮರವಾದರೂ, ಸಂವರ್ಧ್ಯ - ಬೆಳಯಿಸಿ, ಸ್ವಯಂ-ತಾನೆ, ಛೇತ್ತುಂ-ಕಡಿದುಹಾಕುವುದಕ್ಕೆ, ಅಸಾಂಪ್ರತಂ-ತಕ್ಕದ್ದಲ್ಲ.

ತಾತ್ಪರ್ಯ—ಎಲೈ ದೇವತೆಗಳಿರಾ ! ನನ್ನ ವರಬಲದಿಂದಲೇ ಅಭಿವೃದ್ಧಿಯನ್ನು ಪಡೆದಿರುವ ಈ ತಾರಕನನ್ನು ನಾನೇ ಕೊಲ್ಲುವುದು ಧರ್ಮವಲ್ಲ. ಕಾರಣಾಂತರದಿಂದ ತಾನು ಬೆಳೆಯಿಸದ ವಿಷವೃಕ್ಷವನ್ನಾದರೂ ತಾನೇ ಕಡಿದುಹಾಕುವುದು ತಕ್ಕದ್ದಲ್ಲವಲ್ಲವೇ ?

ಆಕಾಂಕ್ಷೆ—ಅಸಾಂಪ್ರತಂ, ಕಿಂಕರ್ತುಂ? ಛೇತ್ತುಂ, ಕಃ? ಸ್ವಯಂ, ಕಿಂಕೃತ್ವಾ? ಸಂವರ್ಧ್ಯ, ಕೋಽಪಿ? ವಿಷವೃಕ್ಷೋಽಪಿ, ನಾರ್ಹತಿ, ಕಃ? ದೈತ್ಯಃ, ಕಂ? ಕ್ಷಯಂ (ಸ,ಪ್ರ) ಕುತ ಏವ? ಇತ ಏವ, ಕಥಂಭೂತಃ ದೈತ್ಯಃ? ಸಃ, ಪುನಃ ಕಥಂಭೂತಃ ದೈತ್ಯಃ? ಪ್ರಾಪ್ತಶ್ರೀಃ, ಕುತಃ? ಇತಃ.

ವಿಗ್ರಹ—(೮) ಪ್ರಾಪ್ತಾ, ಶ್ರೀಃ ಯೇನಸಃ-ಪ್ರಾಪ್ತಶ್ರೀಃ (ತೃ,ಬ,ವ್ರೀ) (೧೦) ವಿಷಸ್ಯ ವೃಕ್ಷಃ-ವಿಷವೃಕ್ಷಃ (ಷ,ತ) (೫) ನ, ಸಾಂಪ್ರತಂ-ಅಸಾಂಪ್ರತಂ (ನಞ್, ತ)

ಧಾತುರೂಪ—(√) ಅರ್ಹತಿ, ಅರ್ಹತಃ, ಅರ್ಹಂತಿ,
ಅರ್ಹಸಿ, ಅರ್ಹಥಃ, ಅರ್ಹಥ,
ಅರ್ಹಾಮಿ, ಅರ್ಹಾವಃ, ಅರ್ಹಾಮಃ.

ಧಾತ್ವರ್ಥ---(ಅರ್ಹ-ಪೂಜಾಯಾಂ) ಪೂಜಿಸುವಿಕೆ, ಎಂಬರ್ಥವುಳ್ಳ ‹ ಅರ್ಹ › ಎಂಬ ‹ ಭ್ವಾದಿ › ಎಂದರೆ ಗಣದ ಪರಸ್ಮೈಪದಿ ಧಾತುವು ‹ ಲಟ್ › ಲಕಾರದ ವರ್ತಮಾನಕಾಲದ ಪ್ರಥಮಪುರುಷೈಕವಚನರೂಪದಲ್ಲಿದೆ.

ವಿಶೇಷ—(೧) ಪಂಚಮ್ಯರ್ಥದಲ್ಲಿ ತಸಿಲ್ ಪ್ರತ್ಯಯವು (೯) ನಾಶ, ಮನೆ, ರೋಗವಿಶೇಷ: ಇವು ನಾನಾರ್ಥಗಳು. (೧೨) ‹ ಸಂ › ಎಂಬ ಉಪಸರ್ಗಪೂರ್ವಕವಾದ ‹ ವೃಧ › ಧಾತುವಿಗೆ ‘ ಲ್ಯಪ್ ’ ಪ್ರತ್ಯಯವು ಸೇರಿ ಧಾತುವಿನ ಉಪಧಾಸ್ವರವಾದ ಋಕಾರಕ್ಕೆ ಗುಣಾದೇಶವು ಬಂದು ಸಂ + ವೃಧ್ + ಯ = ಸಂವರ್ಧ್ಯ ಎಂದಾಯಿತು. [೧೪] ಛಿದಿರ್ ಎಂಬ ಧಾತುವಿಗೆ ‹ ತುಮುನ್ › ಪ್ರತ್ಯಯವು ಸೇರಿ ಧಾತುವಿನ ಉಪಧಾಸ್ವರಕ್ಕೆ ಗುಣವು ಬಂದಿದೆ. (೧೫) ನಿಪಾತದಿಂದ ಇದಕ್ಕೆ ಅಭಿಹಿತತ್ವವು ಬಂತು. ಅಭಿಹಿತತ್ವವು ಬಾರದಿದ್ದರೆ ಕರ್ಮಾರ್ಥದಲ್ಲಿ ವೃಕ್ಷಶಬ್ದಕ್ಕೆ ದ್ವಿತೀಯೆಯು ಬರಬೇಕಾಗಿತ್ತು. ಈ ಶ್ಲೋಕದಲ್ಲಿ ‘ ತನ್ನಿಂದ ವೃದ್ಧಿಹೊಂದಿದವನನ್ನು ತಾನೇ ನಾಶಮಾಡಬಾರದು ’ ಎಂಬ ಪ್ರಸ್ತುತ ಸಾಮಾನ್ಯ ವಾಕ್ಯವನ್ನು ಹೇಳಿ ಅದನ್ನು ಸಮರ್ಥನಮಾಡುವುದಕ್ಕೆ ಅಪ್ರ

ಸ್ತುತ ಸಾಮಾನ್ಯವಾದ ' ತಾನು ಬೆಳೆಯಿಸಿದ ವಿಷವೃಕ್ಷವನ್ನಾದರೂ ತಾನು ಕಡಿಯಬಾರದು ' ಎಂಬ ವಾಕ್ಯದಿಂದ ಸಮರ್ಥನೆ ಮಾಡಿರುವುದರಿಂದ ಸಾಮಾನ್ಯದಿಂದ ಸಾಮಾನ್ಯವನ್ನೂ ಸಮರ್ಥನೆ ಮಾಡುವುದೆಂಬ ಅರ್ಥಾಂತರನ್ಯಾಸಾಲಂಕಾರವು ॥೫೫॥

ಶ್ಲೋ॥ ವೃತಂ ತೇನೇದ ಮೇವ ಪ್ರಾಕ್ ಮಯಾ ಚಾಸ್ಮೈ ಪ್ರತಿಶ್ರುತಂ ।
ವರೇಣ ಶಮಿತಂ ಲೋಕಾ ನಲಂ ದಗ್ಧುಂ ಹಿ ತತ್ತಪಃ ॥೫೬॥

ಪದ---(೧) ವೃತಂ (೨) ತೇನ (೩) ಇದಂ (೪) ಏವ (೫) ಪ್ರಾಕ್ (೬) ಮಯಾ (೭) ಚ (೮) ಅಸ್ಮೈ (೯) ಪ್ರತಿಶ್ರುತಂ (೧೦) ವರೇಣ (೧೧) ಶಮಿತಂ (೧೨) ಲೋಕಾನ್ [೧೩] ಅಲಂ [೧೪] ದಗ್ಧುಂ (೧೫) ಹಿ (೧೬) ತತ್ತಪಃ

ಶಬ್ದ---(೧,೧೧,೯) ಅ,ನ,ಪ್ರ,ಏ (೨) ದ,ಪು,ತೃ,ಏ (೩) ಮ,ನ,ಪ್ರ,ಏ (೪,೫,೭,೧೩,೧೪,೧೫) ಅವ್ಯ (೬) ದ,ಪು,ತೃ,ಏ (೮) ದ,ಪು,ಚ,ಏ [೧೦] ಅ,ಪು,ತೃ,ಏ (೧೨) ಅ,ಪು,ದ್ವಿ,ಬ (೧೬) ಸ,ನ,ಪ್ರ,ಏ.

ಅನ್ವಯ---ಪ್ರಾಕ್, ತೇನ ಇದಮೇವ ವೃತಂ, ಮಯಾಚ ಅಸ್ಮೈಪ್ರತಿಶ್ರುತಂ, ಲೋಕಾನ್ದಗ್ಧುಂಅಲಾ ತತ್ತಪಃ ವರೇಣ ಶಮಿತಂಹಿ.

ಅರ್ಥ---ಪ್ರಾಕ್-ಪೂರ್ವದಲ್ಲಿ, ತೇನ-ಆ ರಾಕ್ಷಸನಿಂದ, ಇದಮೇವ-ಇದೇ (ದೇವತೆಗಳಿಂದ ಅವಧ್ಯತ್ವವೇ) ವೃತಂ - ಯಾಚಿಸಲ್ಪಟ್ಟಿತು. ಮಯಾಚ-ನನ್ನಿಂದಲೂ, ಅಸ್ಮೈ-ಈ ತಾರಕನಿಗೆ, ಪ್ರತಿಶ್ರುತಂ-ಪ್ರತಿಜ್ಞೆ ಮಾಡಲ್ಪಟ್ಟಿತು. ಲೋಕಾನ್-ಲೋಕಗಳನ್ನು, ದಗ್ಧುಂ-ಸುಡುವುದಕ್ಕೆ, ಅಲಂ-ಸಮರ್ಥವಾದ, ತತ್ತಪಃ-ಅವನ ತಪಸ್ಸು, ವರೇಣ-ವರಪ್ರದಾನದಿಂದ, ಶಮಿತಂಹಿ-ಶಾಂತಿಗೊಳಿಸಲ್ಪಟ್ಟಿತಲ್ಲವೇ !

ತಾತ್ಪರ್ಯ---ಈ ತಾರಕನು ಪೂರ್ವದಲ್ಲಿ ಘೋರವಾದ ತಪಸ್ಸನ್ನು ಮಾಡಿ, ನನ್ನನ್ನುಮೆಚ್ಚಿಸಿ, ದೇವತೆಗಳಿಂದ ತನಗೆ ಮರಣವಾಗಕೂಡದೆಂಬ ವರವನ್ನೇ ಕೇಳಿಕೊಂಡನು. ಅವನ ತಪಸ್ಸು ಲೋಕತ್ರಯಗಳನ್ನೂ ಸುಡುವ ಸಾಮರ್ಥ್ಯವುಳ್ಳುದಾದ್ದರಿಂದ ಯತ್ನವಿಲ್ಲದೆ ಅವನ ಪ್ರಾರ್ಥನೆಯನ್ನಂಗೀಕರಿಸಿ ಅವನ ತಪೋಗ್ನಿಯನ್ನು ಶಾಂತಿಗೊಳಿಸಿದೆನು.

ಆಕಾಂಕ್ಷೆ—ಶಮಿತಂಹಿ, ಕೇನ? ವರೇಣ, ಕಿಂ? ತತ್ತಪಃ, ಕಥಂ ಭೂತಂ ತಪಃ? ಅಲಂ, ಕಿಂಕರ್ತುಂ? ದಗ್ಧುಂ, ಕಾನ್? ಲೋಕಾನ್, ಪ್ರತಿಶ್ರುತಂ, ಕೇನಚ ? ಮಯಾಚ, ಕಸ್ಮೈ? ಅಸ್ಮೈ, ವೃತಂ, ಕೇನ? ತೇನ, ಕಿಮೇವ? ಇದಮೇವ, ಕದಾ? ಪ್ರಾಕ್.

• ವಿಗ್ರಹ—(೧೬)ತಸ್ಯತಪಃ-ತತ್ತಪಃ (ಷ,ತ)

ವಿಶೇಷ—(೧) 'ವೃಞ್' ಎಂಬ ಧಾತುವಿಗೆ ಕರ್ಮಾರ್ಥದಲ್ಲಿ 'ಕ್ತ' ಪ್ರತ್ಯಯವು ಸೇರಿದೆ. (೯)'ಶ್ರು' ಧಾತುವಿಗೆ 'ಪ್ರತಿ' ಎಂಬ ಉಪಸರ್ಗವೂ, ಕರ್ಮಾರ್ಥನಲ್ಲಿ 'ಕ್ತ' ಪ್ರತ್ಯಯವೂ ಬಂದಿದೆ. ಇಲ್ಲಿ ಪ್ರತಿ ಎಂಬುದಕ್ಕೆ ಶ್ರುಧಾತು ಪರದಲ್ಲಿರುವುದರಿಂದ, ಇದರಯೋಗದಿಂದ ಈ ಕ್ರಿಯೆಗೆ ಕಾರಣವಾದ ಕರ್ತೃವಿಗೆ ಸಂಪ್ರದಾನವು ಬರುವುದು, ಎಂಬ ಸೂತ್ರಾನುಸಾರವಾಗಿ 'ಅಸ್ಮೈ, ಎಂಬಲ್ಲಿ ಸಂಪ್ರದಾನವು ಬಂದಿದೆ (೧೪)ಸಾಕಾಗುವಿಕೆ, ಎಂಬರ್ಥವುಳ್ಳ 'ಅಲಂ' ಎಂಬ ಶಬ್ದದಯೋಗದಿಂದ 'ತುಮುನ್' ಪ್ರತ್ಯಯವು ಬಂತು ||೫೬||

ಶ್ಲೋ||ಸಂಯುಗೇ ಸಾಂಯುಗೀನಂ ತ ಮುದ್ಯಂತಂ ಪ್ರಸಹೇತ ಕಃ|
ಅಂಶಾದೃತೇ ನಿಷಿಕ್ತಸ್ಯ ನೀಲಲೋಹಿತ ರೇತಸಃ ||೫೭||

ಪದ—(೧) ಸಂಯುಗೇ (೨)ಸಾಂಯುಗೀನಂ (೩)ತಂ (೪) ಉದ್ಯಂತಂ (೫) ಪ್ರಸಹೇತ (೬)ಕಃ (೭)ಅಂಶಾತ್ (೮)ಋತೇ (೯)ನಿಷಿಕ್ತಸ್ಯ(೧೦) ನೀಲಲೋಹಿತರೇತಸಃ.

ಶಬ್ದ—(೧) ಅ,ನ,ಸ,ಏ (೨)ಅ,ಪು,ದ್ವಿ,ಏ (೩)ದ,ಪು,ದ್ವಿ,ಏ. (೪) ತ,ಪು,ದ್ವಿ,ಏ (೫)ಕ್ರಿ (೬)ಮ,ಪು,ಪ್ರ,ಏ (೭) ಅ,ಪು,ಪಂ,ಏ (೮) ಅವ್ಯ (೯)ಅ,ನ,ಷ,ಏ(೧೦) ಸ,ನ,ಷ,ಏ.

ಅನ್ವಯ—ಸಂಯುಗೇ ಉದ್ಯಂತಂ ಸಾಂಯುಗೀನಂತಂ, ನಿಷಿಕ್ತಸ್ಯ ನೀಲಲೋಹಿತ ರೇತಸಃ, ಅಂಶಾತ್ ಋತೇಕಃ ಪ್ರಸಹೇತ ?

ಅರ್ಥ--ಸಂಯುಗೇ-ಯುದ್ಧದಲ್ಲಿ, ಉದ್ಯಂತಂ-ವಿಜೃಂಭಿಸಿದ, ಸಾಂಯುಗೀನಂ-ಯುದ್ಧವೀರನಾದ, ತಂ-ಆತಾರಕನನ್ನು, ನಿಷಿಕ್ತಸ್ಯ-ಇಡಲ್ಪಟ್ಟ, ನೀಲಲೋಹಿತ-ಈಶ್ವರನ, ರೇತಸಃ-ವೀರ್ಯದ, ಅಂಶಾತ್- ಭಾಗದ

ದೆಶೆಯಿಂದ, ಋತೇ-ಹೊರತು, (ಬಿಟ್ಟು) ಕಃ-ಯಾವನು, ಪ್ರಸಹೇತ-ಸಹಿಸುವನು ? (ತಿರಸ್ಕರಿಸುವನು).

ತಾ॥ ಯುದ್ಧದಲ್ಲಿ ಮಹಾ ಸಮರ್ಥನಾಗಿ ವಿಜೃಂಭಣೆಯಿಂದ ನಿಂತ ಆ ತಾರಕನನ್ನು ತಿರಸ್ಕರಿಸಬೇಕಾದರೆ, (ನಿಗ್ರಹಿಸಲು) ಪರಮೇಶ್ವರ ವೀರ್ಯಸಂಭೂತನನ್ನು ಬಿಟ್ಟು ಮತ್ತೊಬ್ಬನಿಲ್ಲ.

ಆಕಾಂಕ್ಷೆ—ಪ್ರಸಹೇತ. ಕಃ ? ಕಃ, ಕಂ? ತಂ ( ಸ, ಪ್ರ ) ಕಥಂ? ಋತೇ, ಕಸ್ಮಾತ್ ? ಅಂಶಾತ್, ಕಸ್ಯ? ನೀಲಲೋಹಿತ ರೇತಸಃ, ಕಥಂ ಭೂತಸ್ಯ ನೀಲ ಲೋಹಿತ ರೇತಸಃ ? ನಿಷಿಕ್ತಸ್ಯ, ಕಥಂ ಭೂತಂ ? ಸಾಂಯುಗೀನಂ, ಪುನಃ ಕಥಂ ಭೂತಂತಂ ? ಉದ್ಯಂತಂ, ಕುತ್ರ, ಸಂಯುಗೇ,

ವಿಗ್ರಹ—(೧೦) ನೀಲ ಲೋಹಿತಸ್ಯ ರೇತಃ-ನೀಲಲೋಹಿತರೇತಃ.

ಧಾತುರೂಪ—(೫) ಪ್ರಸಹೇತ, ಪ್ರಸಹೇಯಾತಾಂ, ಪ್ರಸಹೇರನ್,
ಪ್ರಸಹೇಥಾಃ, ಪ್ರಸಹೇಯಾಥಾಂ, ಪ್ರಸಹೇಧ್ವಂ,
ಪ್ರಸಹೇಯ, ಪ್ರಸಹೇವಹಿ, ಪ್ರಸಹೇಮಹಿ.

ಧಾತ್ವರ್ಥ— (ಷಹ-ಮರ್ಷಣೇ) ಸಹಿಸುವಿಕೆ - ಎಂಬರ್ಥವುಳ್ಳ, 'ಭ್ವಾದಿ' ಒಂದನೆಯ ಗಣದ ಆತ್ಮನೇಪದಿ ಸಕರ್ಮಕ ಧಾತುವಾದ 'ಷಹ, ಎಂಬ ಇವದಕ್ಕೆ 'ಪ್ರ' ಎಂಬುಪಸರ್ಗವು ಸೇರಿ 'ತಿರಸ್ಕರಿಸುವುದು, ಎಂಬರ್ಥವುಳ್ಳದ್ದಾಗಿ ವಿಧ್ಯರ್ಥದ 'ಲಿಙ್' ಲಕಾರದ ಪ್ರಥಮ ಪು॥ಏ

ವಿಶೇಷ--(೨) ಸಂಯುಗೇ ಸಾಧುಃ- ಸಾಂಯುಗೀನಃ, (ತ, ವೃ) ತತ್ರಸಾಧುಃ, ಎಂಬರ್ಥದಲ್ಲಿ, ಸಂಯುಗಶಬ್ದವು 'ಪ್ರತಿಜನ, ಮೊದಲಾದ ಗಣದಲ್ಲಿ ಸೇರಿರುವುದರಿಂದ 'ಖಙ್, (ಈನ) ಪ್ರತ್ಯಯವು ಬಂತು, 'ಞಕಾರವು ಲೋಪವನ್ನು ಹೊಂದುವ ಪ್ರತ್ಯಯವಾದುದರಿಂದ ಶಬ್ದದ ಆದಿಸ್ವರಕ್ಕೆ ವೃದ್ಧಿ ಬಂದಿದೆ. (೪) ಉತ್ + ಯತ್ + ಶತೃ-ಉದ್ಯತ್, ಉತ್ಪೂರ್ವಕವಾದ ಯತ ಧಾತುವಿಗೆ 'ಲಟ್, ಲಕಾರಾರ್ಥದಲ್ಲಿ ವರ್ತಮಾನ, ಶತೃ ಪ್ರತ್ಯಯವೂ, ಪ್ರತ್ಯಯದ ಶಕಾರವು ಲೋಪವಾಗುವುದರಿಂದ 'ಮುಮ್, ಎಂಬಾಗಮವೂ ಬಂದಿದೆ. (೫) ಪ್ರಸಹನವೆಂದರೆ ತಿರಸ್ಕರಿ

ಸುವುದೆಂದು ವೃತ್ತಿಕಾರರು ಹೇಳಿದ್ದಾರೆ. (೮) ವಿನಾರ್ಥವುಳ್ಳ ಋತೇ, ಎಂಬ ಶಬ್ದದ ಪ್ರಯೋಗದಿಂದ ಪಂಚಮಿ ಬಂತು (೯) ನಿ + ಸಿಚ್ + ತ ಷಿಚ್, ಎಂಬ ಸೇಚನಾರ್ಥ ಧಾತುವಿಗೆ;ನಿ ಎಂಬ ಉಪಸರ್ಗವು ಸೇರಿದೆ ಇಕಾರಕ್ಕೆ ಪರದಲ್ಲಿ ಸ,ಕಾರ ವಿರುವುದರಿಂದ ಸಕಾರಕ್ಕೆ ಷತ್ವವು ಬಂ ದಿದೆ. ಧಾತುವಿನ ಚಕಾರಕ್ಕೆ ಕುತ್ವ,ವು ಬಂದು ಕಕಾರಾದೇಶವು ಬಂ ದಿದೆ, ಕರ್ಮಾರ್ಥದಲ್ಲಿ ಕ್ತ, ಪ್ರತ್ಯಯವು ಸೇರಿದೆ (ಕೃ,ಪ್ರ) (೧೦)ನೀಲಃ (ಕಂಠೇ) ಲೋಹಿತಃ (ಕೇಶೇಷು) ಯಸ್ಯಸಃ-ನೀಲಲೋಹಿತಃ, ಕೊರಲ ಲ್ಲಿ ಕಪ್ಪುಬಣ್ಣವೂ, ಕೂದಲುಗಳಲ್ಲಿ ಕೆಂಪು ಬಣ್ಣವೂ ಯಾರಿಗುಂಟೋ ಅವನು ಎಂದು (ಸ್ವಾಮಿ)॥೫೭॥

ಶ್ಲೋ॥ಸ ಹಿ ದೇವಃ ಪರಂಜ್ಯೋತಿ ಸ್ತಮಃಪಾರೇ ವ್ಯವಸ್ಥಿತಂ ।
ಪರಿಚ್ಛಿನ್ನ ಪ್ರಭಾವರ್ಧಿ ರ್ನ ಮಯಾ ನಚ ವಿಷ್ಣುನಾ॥೫೮॥

ಪದ—(೧)ಸಃ (೨)ಹಿ (೩)ದೇವಃ (೪)ಪರಂ (೫) ಜ್ಯೋತಿಃ(೬) ತಮಃಪಾರೇ (೭) ವ್ಯವಸ್ಥಿತಂ (೮) ಪರಿಚ್ಛಿನ್ನ ಪ್ರಭಾವರ್ಧಿಃ (೯) ನ (೧೦)ಮಯಾ (೧೧)ನ, (೧೨)ಚ (೧೩) ವಿಷ್ಣುನಾ.

ಶಬ್ದ—(೧) ದ,ಪು,ಪ್ರ,ಏ (೨,೯,೧೧,೧೨) ಅವ್ಯ (೩)ಅ,ಪು,ಪ್ರ, ಏ (೪,೭) ಅ,ನ,ಪ್ರ,ಏ (೫) ಸ,ನ,ಪ್ರ,ಏ (೬) ಅ,ನ,ಸ,ಏ (೮) ಇ,ಪು, ಪ್ರ,ಏ (೧೦) ದ,ಪು,ತೃ,ಏ (೧೩) ಉ,ಪು,ತೃ,ಏ.

ಅನ್ವಯ—ಸಃದೇವಃ ತಮಃ ಪಾರೇವ್ಯವಸ್ಥಿತಂ ಪರಂಜ್ಯೋತಿಃ ಹಿ, ಮಯಾ ಪರಿಚ್ಛಿನ್ನ ಪ್ರಭಾವರ್ಧಿಃ, ವಿಷ್ಣುನಾಚ ನ,

ಅರ್ಥ—ಸಃ-ಆ, ದೇವಃ-ಈಶ್ವರನು, ತಮಃ - ತಮೋಗುಣದ, ಪಾರೇ-ಆಚೆ, ವ್ಯವಸ್ಥಿತಂ-ಇರುತ್ತಿರುವ, ಪರಂ-ಶ್ರೇಷ್ಠವಾದ, ಜ್ಯೋ ತಿಃ-ಜ್ಯೋತಿಸ್ಸ್ವರೂಪನು,(ಪರಮಾತ್ಮನು) ಹಿ-ಅಲ್ಲವೇ ?(ಆದಕಾರಣ) ಮಯಾ-ನನ್ನಿಂದಲೂ, ಪರಿಚ್ಛಿನ್ನ-ನಾಶಪಡಿಸಲ್ಪಟ್ಟ, ಪ್ರಭಾವ-ಮಹಿಮೆ ಯ, ಋದ್ಧಿಃ-ಏಳಿಗೆಯುಳ್ಳವನು, ನ-ಅಲ್ಲ, ವಿಷ್ಣುನಾಚ-ವಿಷ್ಣುವಿನಿಂದ ಲೂ, ನ - ಅಲ್ಲ.

ತಾ ॥ ಆ ಪರಮೇಶ್ವರನು ತಮೋಗುಣಾ ತೀತನಾಗಿಯೂ,

ಕೇವಲ ಸಚ್ಚಿದಾನಂದ ಸ್ವರೂಪನಾಗಿಯೂ,ಇರುವ ಪರಮಾತ್ಮನಾದುದ ರಿಂದ, ಅವನ ಶಕ್ತಿಪ್ರಭಾವವನ್ನು ನಾನಾಗಲಿ, ವಿಷ್ಣುವಾಗಲಿ ತಗ್ಗಿಸಲಾ ರೆವು ಅಂದರೆ ನಮಗಿಂತ ಶಕ್ತನಾದ ಆ ಪರಮೇಶ್ವರನ ವೀರ್ಯದಿಂದುತ್ಪ ನ್ನನಾದವನಾದರೆ, ತಾರಕನನ್ನು ಜಯಿಸುವನೆಂದು ಭಾವವು.

ಆಕಾಂಕ್ಷೆ—ನ, ಕೇನಚ? ವಿಷ್ಣುನಾಚ, ನ, ಕೇನ? ಮಯಾ, ಕ ಥಂಭೂತಃ? ಪರಿಚ್ಛಿನ್ನ ಪ್ರಭಾವರ್ಧಿಃ, ಹಿ, ಕಿಂ? ಜ್ಯೋತಿಃ, ಕಥಂಭೂ ತಂ ಜ್ಯೋತಿಃ ? ಪರಂ, ಪುನಃ ಕಥಂ ಭೂತಂ ಜ್ಯೋತಿಃ? ವ್ಯವಸ್ಥಿತಂ, ಕುತ್ರ? ತಮಃಪಾರೇ, ಕಃ? ದೇವಃ, ಕಥಂಭೂತಃ ದೇವಃ? ಸಃ.

ವಿಗ್ರಹ—(೬) ತಮಸಃ ಪಾರಂ-ತಮಃಪಾರಂ (ಷ,ತ) + ತಸ್ಮಿನ್ (೯) ಪ್ರಭಾವಸ್ಯ ಋದ್ಧಿಃ-ಪ್ರಭಾವರ್ಧಿಃ (ಷ, ತ) ಪರಿಚ್ಛಿನ್ನಾ ಪ್ರಭಾ ವರ್ಧಿಃ ಯಸ್ಯಸಃ-ಪರಿಚ್ಛಿನ್ನ ಪ್ರಭಾವರ್ಧಿಃ (ಷ,ಬ,ವ್ರೀ)

ವಿಶೇಷ---(೭) ವಿ + ಅವ + ಸ್ಥಾ + ಇ + ತಂ, ಸ್ಥಾಧಾತುವಿಗೆ, ವಿ, ಅವ, ಎಂಬೆರಡುಪಸರ್ಗಗಳು ಸೇರಿ ಕರ್ಮಾರ್ಥದಲ್ಲಿ 'ಕ್ತ' ಪ್ರತ್ಯ ಯವೂ, ಇಡಾಗಮವೂ ಬಂತು, (೯) ಋದ್ಧಿಶಬ್ದವು ಸ್ತ್ರೀಲಿಂಗವಾದರೂ ಸಮಾಸಾಂತದಲ್ಲಿ ಬಹುವ್ರೀಹಿಯಲ್ಲಿ ಪುಲ್ಲಿಂಗವಾಯ್ತು (೧೨)ವೇಷ್ಟಿ, ಇತಿ ವಿಷ್ಣುಃ (ಕೃ,ವೃ) ವ್ಯಾಪಕಾರ್ಥಕವಾದ 'ವಿಷ್' ಎಂಬ ಧಾತುವಿಗೆ ಇಷ್ಣು ಪ್ರತ್ಯಯವು ಬಂದಿದೆ ||೫೯||

ಶ್ಲೋ|| ಉಮಾರೂಪೇಣ ತೇ ಯೂಯಂ ಸಂಯಮ ಸ್ತಿಮಿತಂ ಮನಃ ।

ಶಂಭೋರ್ಯತಧ್ವಮಾಕ್ರಷ್ಟು ಮಯಸ್ಕಾಂತೇನ ಲೋಹವತ್ ||

ಪದ—(೧) ಉಮಾರೂಪೇಣ (೨)ತೇ (೩) ಯೂಯಂ (೪) ಸಂ ಯಮಸ್ತಿಮಿತಂ, (೫)ಮನಃ (೬)ಶಂಭೋಃ (೭) ಯತಧ್ವಂ (೯) ಆಕ್ರ ಷ್ಟುಂ (೯) ಅಯಸ್ಕಾಂತೇನ (೧೦) ಲೋಹವತ್,

ಶಬ್ದ—(೧) ಅ,ನ,ತೃ,ಏ (೨)ದ,ಪು,ಪ್ರ,ಬ (೩)ದ,ಪು,ಪ್ರ,ಬ(೪) ಅ,ನ,ಪ್ರ,ಏ (೫) ಸ,ನ,ಪ್ರ,ಏ (೬)ಉ,ಪು,ಷ,ಏ (೭)ಕ್ರಿ (೯,೧೦) ಅವ್ಯ (೯) ಅ,ಪು,ತೃ,ಏ.

ಅನ್ವಯ—ತೇಯೂಯಂ ಸಮಾಧಿಸ್ತಿಮಿತಂ ಶಂಭೋಃಮನಃ,ಉ ಮಾರೂಪೇಣ, ಅಯಸ್ಕಾಂತೇನ ಲೋಹವತ್, ಆಕ್ರಷ್ಟುಂ ಯತಧ್ವಂ.

ಅರ್ಥ--ತೇ-ಅಂತಹ, ಯೂಯಂ-ನೀವು, ಸಮಾಧಿ-ಸಮಾಧಿಯಲ್ಲಿ, ಸ್ತಿಮಿತಂ-ನಿಶ್ಚಲವಾದ, ಶಂಭೋಃ-ಈಶ್ವರನ, ಮನಃ-ಮನಸ್ಸನ್ನು, ಉಮಾ-ಪಾರ್ವತಿಯು, ರೂಪೇಣ-ಸೌಂದರ್ಯದಿಂದ, ಅಯಸ್ಕಾಂತೇನ-ಸೂಜಿಕಲ್ಲಿನಿಂದ, ಲೋಹವತ್-ಕಬ್ಬಿಣ ದೋಪಾದಿಯಲ್ಲಿ ಆಕ್ರಷ್ಟುಂ-ಸೆಳೆಯುವುದಕ್ಕೆ, ಯತಧ್ವಂ-ಪ್ರಯತ್ನಿಸಿರಿ.

ತಾ|| ಎಲೈ ದೇವತೆಗಳಿರಾ ! ಅಂತಹ ಕಾರ್ಯಾರ್ಥಿಗಳಾದ ನೀವು ಈಗ ಸಮಾಧಿನಿಷ್ಠನಾಗಿ, ನಿಶ್ಚಲನಾಗಿ ಕುಳಿತಿರುವ ಈಶ್ವರನ ಮನಸ್ಸನ್ನು, ಪಾರ್ವತಿಯ ಸೌಂದರ್ಯ ಬಲದಿಂದ, ಸೂರ್ಯಕಾಂತ ಶಿಲೆಯು ಲೋಹ (ಕಬ್ಬಿಣ)ವನ್ನು ತನ್ನಕಡೆಗೆ ಸೆಳೆದುಕೊಳ್ಳುವಂತೆ, ಹೊರಬಚ್ಚು ಮಾಡಿ ಬಹಿರ್ಮುಖನನ್ನಾಗಿ ಮಾಡಿರಿ.

ಆಕಾಂಕ್ಷೆ—ಯತಧ್ವಂ, ಕೇ? ಯೂಯಂ,(ಅ,ಪ್ರ)ಕಿಂಕರ್ತುಂ? ಆಕ್ರಷ್ಟುಂ, ಕಥಂ? ಲೋಹವತ್, ಕೇನ-ಅಯಸ್ಕಾಂತೇನ, ಕಿಂ?ಮನಃ ಕೇನ? ಉಮಾರೂಪೇಣ, ಕಸ್ಯ?ಶಂಭೋಃ, ಕಥಂಭೂತಂ ಮನಃ?ಸಮಾಧಿಸ್ತಿಮಿತಂ, ಕಥಂಭೂತಾಃ ಯೂಯಂ? ತೇ;

ವಿಗ್ರಹ—(೧) ಉಮಾಯಾಃ ರೂಪಂ-ಉಮಾರೂಪಂ (ಷ,ತ) + ತೇನ, (೪) ಸಂಯಮೇನಸ್ತಿಮಿತಂ-ಸಂಯಮಸ್ತಿಮಿತಂ (ತೃ,ತ(ನ)ಅಯಸಃ ಕಾಂತಃ-ಅಯಸ್ಕಾಂತಃ (ಷ,ತ) + ತೇನ,

ಧಾತುರೂಪ—(೭) ಯತತಾಂ, ಯತೇತಾಂ, ಯತಂತಾಂ,
ಯತಸ್ವ, ಯತೇಥಾಂ, ಯತಧ್ವಂ,
ಯತೈ, ಯತಾವಹೈ, ಯತಾಮಹೈ,

ಧಾತ್ವರ್ಥ—(ಯತೀ-ಪ್ರಯತ್ನೇ) ಯತ್ನಿಸುವಿಕೆ, ಎಂಬರ್ಥವುಳ್ಳ ಭ್ವಾದಿ, ಒಂದನೆಯ ಗಣದ ಆತ್ಮನೇ ಪದಿ,ಯತ, ಧಾತುವು 'ಆಜ್ಞಾರ್ಥ, ಲೋಟ್ ಲಕಾರದ ಮಧ್ಯಮ ಪುರುಷ ಬಹುವಚನ ರೂಪದಲ್ಲಿದೆ.

ವಿಶೇಷ--(೧) ರೂಪ-ಸ್ವಭಾವ, ಸೌಂದರ್ಯ, ನಾಣ್ಯ, ಪಶು, ಶಬ್ದ, ಗ್ರಂಥಾವೃತ್ತಿ, ನಾಟಕಾದಿಗಳು, ಆಕಾರ, ಶ್ಲೋಕ, ಇವು ನಾನಾರ್ಥಗಳು (೨)ಕೃಷ್, ಧಾತುವಿಗೆ ಆ, ಎಂಬುಪಸರ್ಗವೂ, ತುಮರ್ನ,

ಪ್ರತ್ಯಯವೂಸೇರಿದೆ, ಪ್ರತ್ಯಯದತಕಾರಕ್ಕೆಷ್ಟುತ್ವದಿಂದ ಟಕಾರಾದೇಶವು ಬಂತು, (೧೦)ಅಯಸ್ಕಾಂತಂ. ಎಂಬಲ್ಲಿ ಕಸ್ಕಾದಿ, ಗಣದಲ್ಲಿ ಸೇರಿರುವು ದರಿಂದ ಸಕಾರಾದೇಶವು ಬಂದಿದೆ, ಈ ಶ್ಲೋಕದಲ್ಲಿ ಸೂಜಿಕಲ್ಲಿನಿಂದ ಕಬ್ಬಿಣವನ್ನೆಳೆಯುವ ಹಾಗೆ ಪಾರ್ವತಿಯು ಸೌದರ್ಯದಿಂದ ಈಶ್ವರನ ಮ ನಸ್ಸನ್ನು ಎಳೆಯುಬೇಕು, ಎಂಬ ವಾಕ್ಯಾರ್ಥದಿಂದ ಉಪಮಾಲಂ ಕಾರವು ॥೫೯॥

ಶ್ಲೋ॥ ಉಭೇ ಏವಕ್ಷಮೇ ವೋಢುಮುಭಯೋ ರ್ಬೀಜಮಾಹಿತಂ ।

ಸಾ ವಾ ಶಂಭೋಸ್ತದೀಯಾ ವಾ ಮೂರ್ತಿರ್ಜಲಮಯಿ ಮಮ॥

ಪದ—(೧)ಉಭೇ (೨)ಏವ (೩)ಕ್ಷಮೇ (೪)ವೋಢುಂ (೫)ಉ ಭಯೋಃ (೬)ಬೀಜಂ (೭)ಆಹಿತಂ (೮)ಸಾ (೯)ವಾ(೧೦)ಶಂಭೋಃ(೧೧ ತದೀಯಾ (೧೨)ವಾ (೧೩)ಮೂರ್ತಿಃ (೧೪)ಜಲಮಯಿ (೧೫)ಮಮ.

ಶಬ್ದ—(೧,೩) ಆ,ಸ್ತ್ರೀ,ಪ್ರ,ದ್ವಿ, (೨,೪,೯,೧೨)ಅವ್ಯ (೫)ಅ,ಪು, ಷ,ದ್ವಿ, (೬)ಅ,ನ,ದ್ವಿ,ಏ (೮)ದ,ಸ್ತ್ರೀ,ಪ್ರ,ಏ (೧೦)ಉ,ಪು,ಷ,ಏ(೧೨)ಆ, ಸ್ತ್ರೀ,ಪ್ರ,ಏ (೧೩)ಇ,ಸ್ತ್ರೀ,ಪ್ರ,ಏ (೧೪) ಈ, ಸ್ತ್ರೀ, ಪ್ರ, ಏ (೧೫) ದ, ಪು, ಷ, ಏ.

ಅನ್ವಯ—ಉಭಯೋಃ ಆಹಿತಂ ಬೀಜಂ ಸಾವಾ ಶಂಭೋಃ ತ ದೀಯಾ ಜಲಮಯಿ ಮೂರ್ತಿರ್ವಾಮಮ ಉಭೇ ಏವವೋಢುಂ ಕ್ಷಮೇ

ಅರ್ಥ-ಉಭಯೋಃ-ನಮ್ಮಿಬ್ಬರ (ಪರಮೇಶ್ವರನ ಮತ್ತು ನನ್ನ) ಆಹಿತಂ-ಪ್ರಯೋಗಿಸಲ್ಪಟ್ಟ, ಬೀಜಂ-ವೀರ್ಯವನ್ನು, ಸಾವಾ-ಆ ಪಾರ್ವ ತಿಯಾಗಲಿ, ಶಂಭೋಃ-ಈಶ್ವರನ, ತದೀಯಾ - ಆ ಈಶ್ವರನ ಸಂಬಂ ಧವಾದ, ಜಲಮಯೀ - ಜಲರೂಪವಾದ, ಮೂರ್ತಿರ್ವಾ - ದೇಹವಾ ಗಲಿ, ಮಮ-ನನ್ನ, (ಹೀಗೆ) ಉಭೇ-ಈ ಎರಡು ದೇಹಗಳು (ಉಮಾ ಮತ್ತು ಜಲಗಳು)ಏವ-ಮಾತ್ರವೇ, ವೋಢುಂ-ಧರಿಸುವುದಕ್ಕೆ, ಕ್ಷಮೇ- ಶಕ್ತರು.

ತಾ॥ ಪರಮೇಶ್ವರನ ವೀರ್ಯವನ್ನು ಅವನ ನಾಮಾರ್ಧ ಶರೀರ ವಾದ ಪಾರ್ವತಿ, ನನ್ನ ವೀರ್ಯವನ್ನು ಆತನ ಜಲರೂಪವಾದ ದೇಹ,(ಜಲ

ಮೂರ್ತಿ) ಇವರಿಬ್ಬರು ಮಾತ್ರವೇ ಧರಿಸಲು ಶಕ್ತರಲ್ಲದೆ ಮತ್ತಾರಿಂದ ಲೂ, ಹೊಂದಲಸಾಧ್ಯವು.

ಆಕಾಂಕ್ಷೆ--ಕ್ಷಮೇ-ಕೇ? ಉಭೇಏವ, ಕಿಂಕರ್ತುಂ? ವೋಢುಂ-ಕಸ್ಯ? ಮಮ,ಕಾವಾ ? ಮೂರ್ತಿರ್ವಾ, ಕಥಂಭೂತಾ ಮೂರ್ತಿಃ?ಜಲ ಮಯೀ, ಪುನಃ ಕಥಂಭೂತಾ ಮೂರ್ತಿಃ? ತದೀಯಾ, ಕಸ್ಯ? ಶಂಭೋಃ ಕಾವಾ? ಸಾವಾ, ಕಿಂ? ಬೀಜಂ, ಕಥಂಭೂತಂ ಬೀಜಂ ? ಆಹಿತಂ, ಕ ಯೋಃ? ಉಭಯೋಃ.

ವಿಗ್ರಹ--(೧೧) ತಸ್ಯ ಇಯಂ-ತದೀಯಾ (ತ,ವೃ) (೧೨) ಜಲವಿ ಕಾರಾ ಜಲಮಯೀ (ತ,ವೃ)

ವಿಶೇಷ--(೧) ಉಭೇ + ಏವ = ಉಭೇಏವ, ದ್ವಿವಚನವು ಏಕಾ ರಾಂತವಾಗಿರುವುದರಿಂದ ಪ್ರಗೃಹ್ಯಸಂಜ್ಞೆ ಬಂದು,ಸಂಧಿಕಾರ್ಯವು ಬಾರದೆ ಪ್ರಕೃತಿಭಾವವು ಬಂದಿದೆ (೪)ವಹ್ + ತುಂ-ವೋಢುಂ, ,ವಹ್, ಧಾ ತುವಿನ ,ಅ,ಕಾರಕ್ಕೆ ಓಕಾರಾದೇಶವೂ. ಹಕಾರಕ್ಕೆ ಝಲ್ವರ್ಣವೂ ಪರ ವಾಗಿರುವುದರಿಂದ ಢಕಾರವೂ, ಅದರಿಂದ ಪ್ರತ್ಯಯದ ತಕಾರಕ್ಕೆ ಷ್ಟು ತ್ವವೂ, ಢತ್ವವೂ. ಪೂರ್ವಢಕಾರಕ್ಕೆ ಲೋಪವೂ ಬಂದಿದೆ. (೮,೫) ನಿ ತ್ಯದ್ವಿವಚನಗಳು (೬) 'ಧಾ, ಎಂಬ ಧಾತುವಿಗೆ ಆ,ಎಂಬುಪಸರ್ಗವುಸೇರಿ ಕರ್ಮಾರ್ಥದಲ್ಲಿ ,ಕ್ತ, ಪ್ರತ್ಯಯವು ಸೇರಿ, ಧಾತುವಿಗೆ,ಹಿ,ಎಂಬಾ ದೇಶವು ಬಂದಿದೆ ಆ + ಹಿ + ತಂ-ಆಹಿತಂ (ಕೃ,ವೃ) (೧೧),ಛ, ಪ್ರತ್ಯಯವು ಬಂ ದಿದೆ (ತ,ವೃ) (೧೪) ವಿಕಾರಾರ್ಥದಲ್ಲಿ ,ಮ ಯಟ್ ಪ್ರತ್ಯಯವು ಬಂತು. ೬ನೆಯ ಶಬ್ದವು ಕೃದಂತವಾದುದರಿಂದ ಇದರ ಯೋಗವಿರುವುದರಿಂದ, (೫,೧೦,೧೩) ಇವು ಷಷ್ಠ್ಯಂತಗಳಾದುವು. ಈ ಶ್ಲೋಕದಲ್ಲಿ ,ವರ್ಣ್ಯ (ಪ್ರಕೃತ) ವಾದ ಪಾರ್ವತಿಗೂ, ಅವರ್ಣ್ಯ (ಅಪ್ರಕೃತ) ವಾದಜಲಮೂ ರ್ತಿಗೂ, ಬೀಜ ವಹನವೆಂಬ ಒಂದೇ ಧರ್ಮವನ್ನು (ಧರ್ಮೈಕ್ಯ) ಹೇ ಳಿರುವುದರಿಂದ, ವರ್ಣ್ಯಾವರ್ಣ್ಯಗಳಿಗೆ ಧರ್ಮೈಕ್ಯವನ್ನು ಹೇಳು ವುದೇ ದೀಪಕವೆಂಬ ಲಕ್ಷಣಕ್ಕೆ ಸರಿಯಾಗಿರುವ ಕಾರಣ ದೀಪಕಾ ಲಂಕಾರವು ॥೬೦॥

ಶ್ಲೋ॥ ತಸ್ಯಾತ್ಮಾ ಶಿತಿಕಂಠಸ್ಯ ಸೈನಾಪತ್ಯ ಮುಪೇತ್ಯವಃ ।
ಮೋಕ್ಷ್ಯತೇ ಸುರಬಂದೀನಾಂ ವೇಣೀರ್ವೀರ್ಯ ವಿಭೂತಿಭಿಃ॥೬೧

ಪದ--(೧) ತಸ್ಯ (೨)ಆತ್ಮಾ (೩) ಶಿತಿಕಂಠಸ್ಯ (೪)ಸೈನಾಪತ್ಯಂ (೫) ಉಪೇತ್ಯ (೬)ವಃ (೭)ಮೋಕ್ಷ್ಯತೇ(೮)ಸುರಬಂದೀನಾಂ (೯)ವೇಣೀಃ (೧೦)ವೀರ್ಯ ವಿಭೂತಿಭಿಃ.

ಶಬ್ದ--(೧)ದ,ಪು,ಷ,ಏ (೨)ಸ,ಪು,ಪ್ರ,ಏ (೩)ಅ,ಪು,ಷ,ಏ (೪) ಅ,ನ,ದ್ವಿ,ಏ. (೫)ಅವ್ಯ (೬)ದ,ಪು,ಷ,ಬ (೭)ಕ್ರಿ (೮)ಈ,ಸ್ತ್ರೀ,ಷ,ಬ(೯) ಈ,ಸ್ತ್ರೀ,ದ್ವಿ,ಬ (೧೧)ಇ,ಸ್ತ್ರೀ,ತೃ,ಬ.

ಅನ್ವಯ--ತಸ್ಯ ಶಿತಿಕಂಠಸ್ಯ ಆತ್ಮಾ ವಃ ಸೈನಾಪತ್ಯಂ ಉಪೇತ್ಯ, ವೀರ್ಯ ವಿಭೂತಿಭಿಃ ಸುರಬಂದೀನಾಂ ವೇಣೀಃ ಮೋಕ್ಷ್ಯತೆ.

ಅರ್ಥ--ತಸ್ಯ-ಆ, ಶಿತಿಕಂಠಸ್ಯ-ಪರಮೇಶ್ವರನ, ಆತ್ಮಾ-ಪುತ್ರನು, ವಃ-ನಿಮ್ಮ, ಸೈನಾಪತ್ಯಂ-ಸೇನಾಪತಿತ್ವವನ್ನು, ಉಪೇತ್ಯ-ಹೊಂದಿ, ವೀರ್ಯ-ಶೌರ್ಯದ, ವಿಭೂತಿಭಿಃ-ಸಂಪತ್ತಿನಿಂದ, ಸುರ- ದೇವತೆಗಳ, ಬಂದೀನಾಂ-ಸೆರೆಬಿದ್ದಿರುವ ಹೆಂಗಸರ, ವೇಣೀಃ-(ಬೆಳೆಯಿಸಿದ) ಜಡೆಗಳನ್ನು, ಮೋಕ್ಷ್ಯತೆ-ಬಿಡಿಸುತ್ತಾನೆ.

ತಾ॥ ಆ ಪರಮೇಶ್ವರನ ವೀರ್ಯದಿಂದುತ್ಪನ್ನನಾದ ಆತನ ಪುತ್ರನು ನಿಮಗೆ ಸೇನಾಧಿಪತಿಯಾಗಿದ್ದುಕೊಂಡು, ಮಹಾಪರಾಕ್ರಮದಿಂದ ಆತಾರಕನ ಸೊಕ್ಕನ್ನು ಮುರಿದು, ಆ ದುಷ್ಟನು ಸೆರೆಯಲ್ಲಿಟ್ಟಿರುವುದರಿಂದ ದುಃಖಿತರಾಗಿ ಏಕವೇಣೀ ಧಾರಣೆಯನ್ನು ಮಾಡಿ ಕೊಂಡಿರುವ (ಜಡೆಬೆಳೆಸಿರುವುದು) ದೇವತಾಸ್ತ್ರೀಯರ ಬಂಧ ಮೋಕ್ಷಣವನ್ನುಮಾಡಿ ಅವರಿಗೆ ಜಟಾಶೋಧನೆಯನ್ನು ಮಾಡಿಸುವನು.

ಆಕಾಂಕ್ಷೆ---ಮೋಕ್ಷ್ಯತೆ, ಕಃ? ಆತ್ಮಾ, ಕಾಃ? ವೇಣೀಃ (ಸ, ಪ್ರ) ಕಾಸಾಂ? ಸುರಬಂದೀನಾಂ, ಕಾಭಿಃ? ವೀರ್ಯವಿಭೂತಿಭಿಃ, ಕಿಂ ಕೃತ್ವಾ? ಉಪೇತ್ಯ ಕಿಂ! ಸೈನಾಪತ್ಯಂ, ಕೇಷಾಂ? ವಃ, ಕಸ್ಯ ? ಶಿತಿಕಂಠಸ್ಯ, ಕಥಂಭೂತಸ್ಯ ಶಿತಿಕಂಠಸ್ಯ? ತಸ್ಯ.

ವಿಗ್ರಹ--(೩) ಶಿತಿ,ಕಂಠೇ ಯಸ್ಯಸಃ-ಶಿತಿಕಂಠಃ (ಷ,ಬ,ವ್ರೀ) +

ತಸ್ಯ, (೮) ಸುರಾಣಾಂ ಬಂದ್ಯಃ-ಸುರಬಂದ್ಯಃ (ಷ, ತ) + ತಾಸಾಂ, (೧೦) ವೀರ್ಯಸ್ಯ ವಿಭೂತಯಃ-ವೀರ್ಯವಿಭೂತಯಃ (ಷ, ತ) + ತಾಭಿಃ

ಧಾತುರೂಪ—ಮೋಕ್ಷ್ಯತೇ, ಮೋಕ್ಷ್ಯೇತೇ ಮೋಕ್ಷ್ಯಂತೇ
ಮೋಕ್ಷ್ಯಸೇ, ಮೋಕ್ಷ್ಯೇಥೆ, ಮೋಕ್ಷ್ಯಧ್ವೇ
ಮೋಕ್ಷ್ಯೇ, ಮೋಕ್ಷ್ಯಾವಹೇ, ಮೋಕ್ಷ್ಯಾಮಹೇ

ಧಾತ್ವರ್ಥ—ಮುಚ್-(ಮೋಕ್ಷಣೇ) ಬಿಡುವಿಕೆ, ಎಂಬರ್ಥವುಳ್ಳ ತುದಾದಿ, ಆರನೆಯ ಗಣದ ಉಭಯಪದಿ ಮುಚ್, ಎಂಬ ಧಾತುವು ಆತ್ಮನೇಪದಿ ಲೃಟ್, ಲಕಾರದ, ಭವಿಷ್ಯತ್ಕಾಲದ ಪ್ರಥಮ ಪುರುಷ, ಏ.

ವಿಶೇಷ---(೨) ಆತ್ಮಾ-ಯತ್ನ, ಧೈರ್ಯ, ಮನಸ್ಸು, ಸ್ವಭಾವ, ಪರಮಾತ್ಮ, ಜೀವ, ಬುದ್ಧಿ, ಶರೀರ, (ನಾನಾ) (ಆತ್ಮಾವೈಪುತ್ರನಾಮಾಸಿ, ತಾನೇ ಮಗನಾಗಿ ಹುಟ್ಟುವನು, ಎಂಬ ಶ್ರುತಿಬಲದಿಂದ ಇಲ್ಲಿ ಆತ್ಮನ್ ಶಬ್ದಕ್ಕೆ ಪುತ್ರನೆಂದರ್ಥವು (೪) ವ್ಯಧಿಕರಣ ಬ ವ್ರೀ. (ಶುಭ್ರವಾದ ಕೊರಲುಳ್ಳವನು) (೬) ಪತಿಶಬ್ದಾಂತವಾಗಿರುವುದರಿಂದ ಭಾವಾರ್ಥದಲ್ಲಿ (ಯಕ್, ಪ್ರತ್ಯಯವು ಬಂದದೆ (ಕ, ಕಾರವು ಲೋಪವಾಗುವ ಪ್ರತ್ಯಯವಾಗುದರಿಂದ ಶಬ್ದಾದಿ ಸ್ವರಕ್ಕೆ ವೃದ್ಧಿ ಬಂದಿದೆ (ತ, ವೃ) (೫) ಉಪ + ಇ + ತ್ + ಯ, ಉಪ ಎಂಬ ಉಪಸರ್ಗ ವಿಶಿಷ್ಟವಾದ, ಇಣ್,, ಧಾತುವಿಗೆ (ಲ್ಯಪ್, ಪ್ರತ್ಯಯವು ಸೇರಿ, ಇಕಾರಕ್ಕೆ ಗುಣವೂ (ತುಕ್ ಆಗಮವೂ ಬಂತು ॥೬೧॥

ಶ್ಲೋ॥ ಇತಿ ವ್ಯಾಹೃತ್ಯ ವಿಬುಧಾನ್ವಿಶ್ವಯೋನಿಸ್ತಿರೋದಧೇ ।
ಮನಸ್ಯಾಹಿತಕರ್ತ್ತವ್ಯಾಸ್ತೇಪಿ ದೇವಾ ದಿವಂ ಯಯುಃ ॥೬೨॥

ಪದ—(೧) ಇತಿ (೨) ವ್ಯಾಹೃತ್ಯ (೩) ವಿಬುಧಾನ್ (೪) ವಿಶ್ವಯೋನಿಃ (೫) ತಿರೋದಧೇ (೬) ಮನಸಿ (೭) ಆಹಿತಕರ್ತ್ತವ್ಯಾಃ (೮) ತೇ (೯) ಅಪಿ (೧೦) ದೇವಾಃ (೧೧) ದಿವಂ (೧೨) ಯಯುಃ

ಶಬ್ದ—(೧, ೨, ೯) ಅವ್ಯ (೩) ಅ, ಪು, ದ್ವಿ, ಬ (೪) ಇ, ಪು, ಪ್ರ, ಏ (೫, ೧೨) ಕ್ರಿ, (೬) ಸ, ನ, ಸ, ಏ (೭, ೧೦) ಅ, ಪು, ಪ್ರ, ಬ

(೪) ದ, ಪು, ಪ್ರ, ಬ(೧೧) ಓ, ಸ್ತ್ರೀ, ದ್ವಿ, ವಿ.

ಅನ್ವಯು—ವಿಶ್ವಯೋನಿಃ ಇತಿ ವಿಬುಧಾನ್ ವ್ಯಾಹೃತ್ಯತಿರೋದಧೇ ತೇ ದೇವಾಅಪಿಮನಸಿ ಆಹಿತಕರ್ತವ್ಯಾ ಸ್ಸಂತಃ ದಿವಂ ಯಯುಃ

ಅರ್ಥ-ವಿಶ್ವ-ಪ್ರಪಂಚಕ್ಕೆ, ಯೋನಿಃ-ಕಾರಣನಾದ ಬ್ರಹ್ಮನು, ಇತಿ-ಈಪ್ರಕಾರವಾಗಿ, ವಿಬುಧಾನ್-ದೇವತೆಗಳನ್ನು ಕುರಿತು,ವ್ಯಾಹೃತ್ಯ-ಹೇಳಿ, ತಿರೋದಧೇ-ಅಂತರ್ಧಾನವನ್ನು ಹೊಂದಿದನು. ತೇ-ಆ, ದೇವಾ ಅಪಿ-ದೇವತೆಗಳೂ ಸಹ, ಮನಸಿ-ಮನಸ್ಸಿನಲ್ಲಿ, ಆಹಿತ-ಇಡಲ್ಪಟ್ಟ, ಕರ್ತವ್ಯಾಸ್ಸಂತಃ-ಕಾರ್ಯಗೌರವವುಳ್ಳವರಾಗಿ, ದಿವಂ-ಸ್ವರ್ಗವನ್ನು, ಯಯುಃ-ಹೊಂದಿದರು.

ತಾತ್ಪರ್ಯ—ಜಗತ್ಕಾರಣನಾದ ಬ್ರಹ್ಮನು ಈರೀತಿಯಾಗಿ ದೇವತೆಗಳಿಗೆ ತಾರಕನಿಗ್ರಹೋಪಾಯವನ್ನುತಿಳಿಸಿ, ಅಂತರ್ಧಾನವನ್ನೈದಿದನು ಇಂದ್ರಾದಿದೇವತೆಗಳೆಲ್ಲರೂ, ಇದೇ ಪ್ರಯತ್ನವನ್ನು ಮನಸ್ಸಿನಲ್ಲಿಟ್ಟು, ಆಲೋಚಿಸುತ್ತಾ ಸ್ವರ್ಗಲೋಕವನ್ನು ಸೇರಿದರು.

ಆಕಾಂಕ್ಷೆ—ಯಯುಃ, ಕೇ? ದೇವಾಃ, ಕಾಂ? ದಿವಂ, (ಸ, ಪ್ರ) ಕಥಂಭೂತಾಸ್ಸಂತಃ? ಆಹಿತಕರ್ತವ್ಯಾಸ್ಸಂತಃ, ಕುತ್ರ? ಮನಸಿ, ಕಥಂ ಭೂತಾದೇವಾಃ? ತೇ, ತಿರೋದಧೇ, ಕಃ? ವಿಶ್ವಯೋನಿಃ (ಅ, ಪ್ರ) ಕಿಂ ಕೃತ್ವಾ? ವ್ಯಾಹೃತ್ಯ, ಕಾನ್? ವಿಬುಧಾನ್, ಕಥಂ? ಇತಿ,

ವಿಗ್ರಹ—(೪) ವಿಶ್ವಸ್ಯಯೋನಿಃ-ವಿಶ್ವಯೋನಿಃ, (ಷ, ತ) (೨) ಆಹಿತಃ ಕರ್ತವ್ಯಃಯೈಸ್ತೇ-ಆಹಿತಕರ್ತವ್ಯಾಃ (ತೃ, ಬ, ವ್ರೀ)

ಧಾತುರೂಪ—(೫)

ತಿರೋದಧೇ, ತಿರೋದಧಾತೇ, ತಿರೋದಧಿರೇ

ತಿರೋದಧಿಷೇ, ತಿರೋದಧಾಥೇ, ತಿರೋದಧಿಧ್ವೇ (ಢ್ವೇ)

ತಿರೋದಧೇ, ತಿರೋದಧಿವಹೇ, ತಿರೋದಧಿಮಹೇ,

ಧಾತ್ವರ್ಥ---(ಡುಧಾಞ್-ಧಾರಣಪೋಷಣಯೋಃ) ಧರಿಸುವುದು ರಕ್ಷಿಸುವುದು, ಎಂಬರ್ಥಗಳುಳ್ಳ (ಜುಹೋತ್ಯಾದಿ, ಮೂರನೆಯ ಗಣದ ಡುಧಾಞ್, ಎಂಬ ಉಭಯಪದಿಧಾತುವು (ತಿರಸ್, ಎಂಬ ಪೂರ್ವಪದ

ದೊಡನೆ ಸೇರಿ (ಅದೃಶ್ಯವಾಗುವಿಕೆ) ಎಂಬರ್ಥವುಳ್ಳದ್ದಾಗಿ ಆತ್ಮನೇಪದದ 'ಲಿಟ್' ಲಕಾರದ ಭೂತರೂಪದ ಪ್ರಥಮಪುರುಷೈಕವಚನದಲ್ಲಿದೆ.

ಧಾತುರೂಪ---(೧೨) ಯಯೌ, ಯಯತುಃ, ಯಯುಃ
ಯಯಿಥ ಯಯಥುಃ, ಯಯ
ಯಯಾಥ
ಯಯೌ, ಯಯಿವ, ಯಯಿಮ

ಧಾತ್ವರ್ಥ---[ಯಾ-ಪ್ರಾಪಣೇ] ಹೋಗುವಿಕೆ, ಎಂಬರ್ಥವುಳ್ಳ 'ಅದಾದಿ, ಎರಡನೆಯ ಗಣದ, ಪರಸ್ಮೈಪದಿ 'ಯಾ' ಎಂಬ ಧಾತುವು 'ಲಿಟ್' ಲಕಾರದ ಭೂತಕಾಲದ ಪ್ರಥಮ ಪುರುಷ ಬಹುವಚನದಲ್ಲಿದೆ

ವಿಶೇಷ—[೨] ವಿ + ಆ + ಹೃ + ತ್ + ಯ = ವ್ಯಾಹೃತ್ಯ, ವಿ, ಆ, ಎಂಬೆರಡುಪಸರ್ಗಗಳಿಂದ ಕೂಡಿದ 'ಹೃಞ್' ಎಂಬ ಧಾತುವಿಗೆ 'ಲ್ಯಪ್' ಪ್ರತ್ಯಯವು, ಪರವಾದುದರಿಂದ 'ತುಕ್' ಎಂಬ ಆಗಮವು ಬಂದಿದೆ. [ಕೃ. ವ್ಯ.] (೪) ಗುಹ್ಯಸ್ಥಾನ, ಕಾರಣ, ತಾಮ್ರಪಾತ್ರೆ, ಪಣ, ಈ ಅರ್ಥಗಳಲ್ಲಿ ಯೋನಿ ಶಬ್ದವು ವರ್ತಿಸುವುದು. (೭) ಆ + ಧಾ + ಇ + ತ = ಆಹಿತ, 'ಧಾ' ಧಾತುವಿಗೆ ಆ ಎಂಬ ಉಪಸರ್ಗವು ಸೇರಿ ಕರ್ಮಾರ್ಥಕ 'ಕ್ತ' ಪ್ರತ್ಯಯವೂ ಇಡಾಗಮವೂ ಬಂತು. ಧಾತುವಿನ ಧಕಾರಕ್ಕೆ ಹಕಾರಾದೇಶವೂ ಬಂದಿದೆ [ಕೃ. ವ್ಯ] ॥೬೨॥

ಶ್ಲೋಕ॥ ತತ್ರ ನಿಶ್ಚಿತ್ಯ ಕಂದರ್ಪ ಮಗಮತ್ಪಾಕಶಾಸನಃ ।
ಮನಸಾ ಕಾರ್ಯಸಂಸಿದ್ಧಾ ತ್ವರಾದ್ವಿಗುಣರಂಹಸಾ ॥೬೩॥

ಪದ---(೧) ತತ್ರ (೨) ನಿಶ್ಚಿತ್ಯ [೩] ಕಂದರ್ಪಂ [೪] ಅಗಮತ್ (೫) ಪಾಕಶಾಸನಃ (೬) ಮನಸಾ [೭] ಕಾರ್ಯಸಂಸಿದ್ಧಾ [೮] ತ್ವರಾದ್ವಿಗುಣರಂಹಸಾ.

ಶಬ್ದ---(೧, ೨) ಅವ್ಯ (೩) ಅ, ಪು, ದ್ವಿ, ಏ (೪) ಕ್ರಿ (೫) ಅ, ಪು, ಪ್ರ, ಏ (೬, ೮) ಸ, ನ, ತೃ, ಏ (೭) ಇ, ಸ್ತ್ರೀ, ಸ, ಏ,

ಅನ್ವಯ---ಪಾಕಶಾಸನಃ ತತ್ರ ಕಂದರ್ಪಂ ನಿಶ್ಚಿತ್ಯ, ಕಾರ್ಯಸಂಸಿದ್ಧೌ ತ್ವರಾದ್ವಿಗುಣರಂಹಸಾ ಮನಸಾ ಅಗಮತ್

ಅರ್ಥ---ಪಾಕಶಾಸನಃ-ಇಂದ್ರನು, ತತ್ರ-ಆ ಈಶ್ವರನ ಮನಸ್ಸನ್ನು ಆಕರ್ಷಣೆ ಮಾಡುವವಿಷಯದಲ್ಲಿ, ಕಂದರ್ಪಂ - ಮನ್ಮಥನನ್ನು, ನಿಶ್ಚಿತ್ಯ-ಕಾರ್ಯಸಾಧಕತ್ವದಿಂದ ನಿಶ್ಚಯಿಸಿ, ಕಾರ್ಯ-ಪ್ರಕೃತಕಾರ್ಯದ, ಸಂಸಿದ್ಧೌ-ಲಾಭವಿಷಯದಲ್ಲಿ, ತ್ವರಾ-ಔತ್ಸುಕ್ಯದಿಂದ, ದ್ವಿಗುಣ-ಎರಡರಷ್ಟಾದ, ರಂಹಸಾ-ವೇಗವುಳ್ಳ, ಮನಸಾ-ಮನಸ್ಸಿನಿಂದ, ಅಗಮತ್-ಸ್ಮರಿಸಿದನು.

ತಾತ್ಪರ್ಯ---ಇಂದ್ರನು ಈಶ್ವರನ ಮನಸ್ಸನ್ನು ಆಕರ್ಷಣೆಮಾಡುವವಿಷಯದಲ್ಲಿ ಮನ್ಮಥನೇ ಸಮರ್ಥನೆಂದು ನಿಶ್ಚಯಿಸಿ, ಕಾರ್ಯಸಿದ್ಧಿಗಾಗಿ ತ್ವರೆಪಡುತ್ತಿರುವುದರಿಂದ ತನ್ನ ಎರಡರಷ್ಟು ವೇಗವುಳ್ಳದ್ದಾಗಿರುವ ಮನಸ್ಸಿನಿಂದ ಸ್ಮರಣೆಮಾಡಿದನು.

ಆಕಾಂಕ್ಷೆ---ಅಗಮತ್, ಕಃ? ಪಾಕಶಾಸನಃ (ಅ, ಪ್ರ) ಕೇನ? ಮನಸಾ, ಕಥಂಭೂತೇನ ಮನಸಾ? ತ್ವರಾದ್ವಿಗುಣರಂಹಸಾ, ಕಸ್ಯಾಂ? ಕಾರ್ಯಸಂಸಿದ್ಧೌ, ಕಿಂಕೃತ್ವಾ? ನಿಶ್ಚಿತ್ಯ, ಕಂ? ಪಾಕಶಾಸನಃ, ಕುತ್ರ? ತತ್ರ.

ವಿಗ್ರಹ---(೭) ಕಾರ್ಯಸ್ಯಸಂಸಿದ್ಧಿಃ-ಕಾರ್ಯಸಂಸಿದ್ಧಿಃ (ಷ, ತ) + ತಸ್ಯಾಂ (೭) ತ್ವರಯಾದ್ವಿಗುಣಂ-ತ್ವರಾದ್ವಿಗುಣಂ (ತೃ, ತ) ತ್ವರಾದ್ವಿಗುಣಂರಂಹಃ ಯಸ್ಯತತ್ - ತ್ವರಾದ್ವಿಗುಣರಂಹಃ (ಷ, ಬ, ವ್ರೀ) + ತೇನ,

| ಧಾತುರೂಪ-(೪) ಅಗಮತ್, | ಅಗಮತಾಂ, | ಅಗಮನ್, |
|---|---|---|
| ಅಗಮಃ | ಅಗಮತಂ, | ಅಗಮತ, |
| ಅಗಮಂ, | ಅಗಮಾವ, | ಅಗಮಾಮ, |

ಧಾತ್ವರ್ಥ---[ಗಮ್-ಗತೌ] ಹೋಗುವಿಕೆ ಎಂಬರ್ಥವುಳ್ಳ 'ಭ್ವಾದಿ' ಬಂದಸೆಯುಗಣದ ಪರಸ್ಮೈಪದಿ 'ಗಮ್ಲ್ಲ' ಎಂಬ ಧಾತುವು 'ಲುಙ್' ಲಕಾರದ ಭೂತಕಾಲದ ಪ್ರಥಮ ಪುರುಷೈಕವಚನದಲ್ಲಿದೆ,

ವಿಶೇಷ-ಸಪ್ತಮ್ಯರ್ಥದಲ್ಲಿ 'ತ್ರಲ್' ಪ್ರತ್ಯಯವು ಬಂದಿದೆ,(೨)ನಿರ್ ಎಂಬುಪಸರ್ಗಪೂರ್ವಕವಾದ 'ಚಿಞ್' ಎಂಬ ಧಾತುವಿಗೆಲ್ಯಪ್‌ಪ್ರತ್ಯಯವೂ

ತುಗಾಗವುವೂ, ಬಂದಿದೆ, (ಕೃ, ವ್ಯ) (೫) ಪಾಕಶಾಸ್ತ್ರೀತಿ - ಪಾಕ ಶಾಸನಃ (ಪಾಕಾಸುರನನ್ನು ಸಂಹರಿಸಿದವನು) ಲ್ಯುಟ್, ಪ್ರತ್ಯಯಾಂತ ಕೃದಂತವು, (೭) ಕಾರ್ಯಸಂಸಿದ್ಧಿತ್ವರಾದ್ವಿಗುಣರಂಹಸಾ, ಎಂದು ಸಮಸ್ತಪದವಾಗಿಯೂ ಪಾಠಾಂತರವು ೬೬॥

ಶ್ಲೋ॥ ಅಥ ಸ ಲಲಿತಯೋಷಿದ್ಭ್ರೂಲತಾಚಾರು ಶೃಂಗಂ ।
ರತಿವಲಯಪದಾಂಕೇ ಚಾಪಮಾಸಜ್ಯ ಕಂಠೇ॥
ಸಹಚರಮಧುಹಸ್ತನ್ಯಸ್ತ ಚೂತಾಂಕುರಾಸ್ತ್ರ ।
ಶ್ಶತಮುಖ ಮುಪತಸ್ಥೇ ಪ್ರಾಂಜಲಿಃ ಪುಷ್ಪಧನ್ವಾ ॥೬೪॥

ಪದ—(೧) ಅಥ [೨] ಸಃ [೩] ಲಲಿತಯೋಷಿದ್ಭ್ರೂಲತಾಚಾರುಶೃಂಗಂ (೪) ರತಿವಲಯ ಪದಾಂಕೇ (೫) ಚಾಪಂ (೬) ಆಸಜ್ಯ (೭) ಕಂಠೇ (೮) ಸಹಚರ ಮಧುಹಸ್ತನ್ಯಸ್ತ ಚೂತಾಂಕುರಾಸ್ತ್ರಃ (೯) ಶತಮುಖಂ (೧೦) ಉಪತಸ್ಥೇ [೧೧] ಪ್ರಾಂಜಲಿಃ (೧೨) ಪುಷ್ಪಧನ್ವಾ

ಶಬ್ದ (೧, ೬) ಅವ್ಯ ( ) ದ, ಪು, ಪ್ರ, ಏ (೩, ೫, ೯)೨, ಪು ದ್ವಿ, ಏ (೪, ೭) ಅ, ಪು, ಸ, ಏ (೮) ಅ, ಪು ಪ್ರ, ಏ (೧೦) ಕ್ರಿ (೧೧)

ಅನ್ವಯ—ಅಥ ಸ ಪುಷ್ಪಧನ್ವಾ ಲಲಿತಯೋಷಿದ್ಭ್ರೂಲತಾಚಾರು ಶೃಂಗಂ ಚಾಪಂ ರತಿವಲಯ ಪದಾಂಕೇ ಕಂಠೇ ಆಸಜ್ಯ ಸಹಚರ ಮಧುಹಸ್ತನ್ಯಸ್ತ ಚೂತಾಂಕುರಾಸ್ತ್ರಃ ಪ್ರಾಂಜಲಿಸ್ಸನ್ ಶತಮುಖಂ ಉಪತಸ್ಥೇ

ಅರ್ಥ—ಅಥ-ಅನಂತರದಲ್ಲಿ, ಸಃ-ಆ, ಪುಷ್ಪಧನ್ವಾ, ಮನ್ಮಥನು, ಲಲಿತ-ಸುಂದರಿಯಾದ, ಯೋಷಿತ್-ಸ್ತ್ರೀಯ, ಭ್ರೂಲತಾ-ಬಳ್ಳಿಯಂತಿರುವ ಹುಬ್ಬುಗಳಂದ, ಚಾರು-ಮನೋಹರವಾದ, ಶೃಂಗಂ - ಕೋಟಿ, (ತುದಿ) ಗಳುಳ್ಳ, ಚಾಪಂ-ಧನುಸ್ಸನ್ನು,ರತಿ-ರತೀದೇವಿಯ, ವಲಯ-ಕಡಗಗಳ (ಬಳೆ) ಪದ-ಪ್ರದೇಶಗಳಿಂದ, ಅಂಕೇ-ಗುರುತಾಗಿರುವ, ಕಂಠೇ-ಕೊರಳಿನಲ್ಲಿ ಆಸಜ್ಯ-ಧರಿಸಿ, ಸಹಚರ-ಸ್ನೇಹಿತನಾದ, ಮಧು - ಚೈತ್ರನ, ಹಸ್ತ-ಕೈಯಲ್ಲಿ, ನ್ಯಸ್ತ-ಇಡಲ್ಪಟ್ಟ, ಚೂತಾಂಕುರ - ಮಾವಿನಮೊಗ್ಗುಗಳೆಂಬ, ಅಸ್ತ್ರಃ-ಬಾಣವುಳ್ಳವನಾಗಿ, ಪ್ರಾಂಜಲಿಸ್ಸನ್- ಅಂಜಲಿಬದ್ಧ

ನಾಗಿ, ಶತಮುಖಂ-ಇಂದ್ರನ್ನು, ಉಪತಸ್ಥೌ-ಸೇವಿಸಿದನು

ತಾತ್ಪರ್ಯ—ಅನಂತರದಲ್ಲಿ ಪುಷ್ಪಬಾಣನಾದ ಮನ್ಮಥನು ಸುಂದರಿಯಾದ ಸ್ತ್ರೀಯುಳ ಲತೆಯಂತಿರುವ ಹುಬ್ಬುಗಳನ್ನುಹೋಲುತ್ತಿರುವ ಕೋಟಿ (ತುದಿ) ಗಳುಳ್ಳ ತನ್ನ ಇಕ್ಷುಚಾಪವನ್ನು ರತಿದೇವಿಯು, ಹಸ್ತಕಟಕಪ್ರದೇಶದಿಂದ(ಕಂಠಾಲಿಂಗನಮಾಡಿಕೊಂಡದ್ದರಿಂದ)ಒತ್ತಿ,ಗುರುತಾಗಿರುವ ತನ್ನ ಕೊರಳನಲ್ಲಿ ಬಿಗಿದುಕಟ್ಟಿ, ತನ್ನಮಿತ್ರನಾದ ಮಧುವಿನ ಕೈಯಲ್ಲಿ ಚೂತಾಂಕುರಗಳೆಂಬ ಬಾಣಗಳನ್ನು ಕೊಟ್ಟು (ವನದಲ್ಲಿ ಚೂತಾಂಕುರಗಳು ವಸಂತ ಋತುವಿನಲ್ಲಿ ಪ್ರಕಾಶಿಸುತ್ತಿದ್ದವೆಂಬ ಭಾವವು) ತಾನು ಅಂಜಲಿ ಬದ್ಧನಾಗಿ ಇಂದ್ರನ ಸಮೀಪದಲ್ಲಿದ್ದನು

ಆಕಾಂಕ್ಷೆ—ಉಪತಸ್ಥೌ, ಕಃ? ಪುಷ್ಪಧನ್ವಾ, ಕಂ? ಶತಮುಖಂ, ಕಥಂಭೂತಸ್ಸನ್? ಪ್ರಾಂಜಲಿಸ್ಸನ್, ಪುನಃ ಕಥಂಭೂತಸ್ಸನ್? ಸಹಚರಮಧುಹಸ್ತನ್ಯಸ್ತಚೂತಾಂಕುರಾಸ್ತ್ರಸ್ಸನ್, ಕಿಂಕೃತ್ವಾ ? ಆಸಜ್ಯ, ಕುತ್ರ ಕಂಠೇ, ಕಥಂಭೂತೇಕಂಠೇ! ರತಿವಲಯಪದಾಂಕೇ, ಕಂ? ಚಾಪಂ, ಕಥಂಭೂತಂ ಚಾಪಂ ? ಲಲಿತಯೋಷಿದ್ಭ್ರೂಲತಾ ಚಾರುಶೃಂಗಂ, ಕಥಂಭೂತಃ ಪುಷ್ಪಧನ್ವಾ ? ಕದಾ ? ಅಥ,

ವಿಗ್ರಹ—(೧) ಲಲಿತಾಚಾಸೌ ಯೋಷಿಚ್ಚ - ಲಲಿತಯೋಷಿತ್ (ವಿ. ಪೂರ್ವ,ಕ) ಲಲಿತಯೋಷಿತಃ ಭ್ರುವೌ-ಲಲಿತಯೋಷಿದ್ಭ್ರುವೌ, (ಷ, ತ)ಲಲಿತಯೋಷಿದ್ಭ್ರುವೌಲತೇಇವ-ಲಲಿತಯೋಷಿದ್ಭ್ರೂಲತೇ (ಉ,ಉ, ಕ,) ಲಲಿತಯೋಷಿದ್ಭ್ರೂಲತೇಇವ ಚಾರುಣೀ-ಲಲಿತಯೋಷಿದ್ಭ್ರೂಲತಾ ಚಾರುಣೀ (ಉ, ಪೂರ್ವ, ಕ) ಲಲಿತಯೋಷಿದ್ಭ್ರೂಲತಾ ಚಾರುಣೀ,ಶೃಂಗೇ ಯಸ್ಯಸಃ-ಲಲಿತಯೋಷಿದ್ಭ್ರೂಲತಾ ಚಾರುಶೃಂಗಃ (ಷ, ಬ, ವ್ರೀ,) + ತಂ (೪) ರತ್ಯಾಃ ವಲಯಾನಿ - ರತಿವಲಯಾನಿ (ಷ, ತ,) ರತಿವಲಯಾನಾಂ ಪದಾನಿ - ರತಿವಲಯಪದಾನಿ (ಷ. ತ) ರತಿವಲಯಪದಾನಾಂ ಅಂಕಃ ಯಸ್ಮಿನ್‌ಸಃ-ರತಿವಲಯಪದಾಂಕಃ (ಸ, ಬ, ವ್ರೀ) + ತಸ್ಮಿನ್ (೫) ಸಹಚರತೀತಿ-ಸಹಚರಃ [ಕೃ, ವೃ] ಸಹಚರಶ್ಚಾಸೌ ಮಧುಶ್ಚ-ಸಹಚರಮಧುಃ (ವಿ, ಪೂರ್ವ, ಕ,)ಸಹಚರ ಮಧೋಃ ಹಸ್ತಃ-

ಸಹಚರಮಧುಹಸ್ತಃ (ಷ, ತ,) ಸಹಚರಮಧುಹಸ್ತೇನ್ಯಸ್ತಂ-ಸಹಚರ ಮಧುಹಸ್ತನ್ಯಸ್ತಂ, ಚೂತಸ್ಯ ಅಂಕುರಂ ಚೂತಾಂಕುರಂ (ಷ, ತ,) ಸಹಚರ ಮಧುಹಸ್ತನ್ಯಸ್ತಂಚತತ್ ಚೂತಾಂಕುರಂಚ-ಸಹಚರಮಧುಹಸ್ತನ್ಯಸ್ತ ಚೂತಾಂಕುರಂ (ವಿ, ಪೂರ್ವ, ಕ,) ಸಹಚರಮಧು ಹಸ್ತನ್ಯಸ್ತ ಚೂತಾಂಕುರಮೇವ ಅಸ್ತ್ರಂ ಯಸ್ಯಸಃ-ಸಹಚರಮಧುಹಸ್ತನ್ಯಸ್ತಚೂತಾಂಕುರಾಸ್ತ್ರಃ (ಷ, ಬ ವ್ರೀ) (೯) ಶತಂಮುಖಾಃ ಯಸ್ಯಸಃ -ಶತಮುಖಃ (ಷ, ಬ, ವ್ರೀ) + ತಂ (೧೨) ಪುಷ್ಪಂಧನುಃ ಯಸ್ಯಸಃ ಪುಷ್ಪಧನ್ವಾ (ಷ, ಬ, ವ್ರೀ,)

ಧಾತುರೂಪ--- (೧೦)

| | | |
|---|---|---|
| ಉಪತಸ್ಥೇ, | ಉಪತಸ್ಥಾತೇ, | ಉಪತಸ್ಥಿರೇ, |
| ಉಪತಸ್ಥಿಷೇ, | ಉಪತಸ್ಥಾಥೇ, | ಉಪತಸ್ಥಿಧ್ವೇ, |
| ಉಪತಸ್ಥೇ, | ಉಪತಸ್ಥಿವಹೇ | ಉಪತಸ್ಥಿಮಹೇ |

ಧಾತ್ವರ್ಥ---(ಷ್ಠಾ-ಗತಿನಿವೃತ್ತೌ) ನಡೆಯದೆ ನಿಲ್ಲುವಿಕೆ, ಎಂಬರ್ಥವುಳ್ಳ ‹ಭ್ವಾದಿ, ಒಂದನೆ ಗಣದ ಪರಸ್ಮೈಪದಿ ‹ಷ್ಠಾ, ಎಂಬ ಧಾತುವು ಉಪ ಎಂಬ ಸರ್ಗದೊಡನೆ ಸೇರಿ ಆತ್ಮನೇಪದಿಯಾಗಿ ‹ಲಿಟ್, ಲಕಾರದ, ಭೂತರೂಪದ ಪ್ರಥಮಪುರುಷೈಕವಚನದಲ್ಲಿದೆ

ವಿಶೇಷ---(೬) ಆ ಎಂಬ ಉಪಸರ್ಗ ಪೂರ್ವಕವಾದ ‹ಷಹ, ಧಾತುವಿಗೆ ‹ಲ್ಯಪ್' ಪ್ರತ್ಯಯವು ಸೇರಿದೆ, (೯) ನೂರು ಯಜ್ಞಗಳನ್ನು ಮಾಡಿದವನು (ಅವ) (೧೧) ಪ್ರಕೃಷ್ಟ ಅಂಜಲಿಃ ಯಸ್ಯಸಃ ಪ್ರಾಂಜಲಿಃ (ಪ್ರಾ, ಬ, ವ್ರೀ,) (೧೨) ಪುಷ್ಪವನ್ನೇ ಧನುಸ್ಸಾಗಿ ಉಳ್ಳವನು (ಅವ) ಧನುಃ ಶಬ್ದವು ಕೊನೆಯಲ್ಲಿದ್ದು ಬಹುವ್ರೀಹಿಸಮಾಸವಾದರೆ ಸಂಜ್ಞಾಶಬ್ದಕ್ಕೆ ವಿಕಲ್ಪವಾಗಿ ‹ಅನಜ್, ಆದೇಶವು ಬರುವುದರಿಂದ ‹ ಪುಷ್ಪಧನುಃ, ಎಂಬ ರೂಪವೂ ಉಂಟು.

ಈ ಶ್ಲೋಕದಲ್ಲಿ ‹ಭ್ರೂಲತಾ, ಎಂಬ ಸ್ಥಳದಲ್ಲಿ ಲುಪ್ತೋಪಮಾಲಂಕಾರವು ಚೂತಾಂಕುರಾಸ್ತ್ರಃ, ಎಂಬಲ್ಲಿ ರೂಪಕಾಲಂಕಾರವು, ಇವೆರಡೂ ಒಂದನ್ನೊಂದು ಅಪೇಕ್ಷಿಸದೆ ಬೇರೆಬೇರೆಯಾಗಿ ಕಾಣಬರು

ತ್ತಿರುವುದರಿಂದ ತಿಲತಂಡುಲವತ್ (ಅಕ್ಕಿ, ಎಳ್ಳು ಬೆರದಂತೆ) ಸಂಸೃಷ್ಟಿಯು, ಮತ್ತು ಮನ್ಮಥನೆಂಬ ವಸ್ತುವನ್ನು ಸ್ವಭಾವವಾಗಿ ಇದ್ದಂತೆ ವರ್ಣಿಸಿರುವುದರಿಂದ ವಸ್ತು ಸ್ವಭಾವಾಖ್ಯಾನ ಸ್ವಭಾವೋಕ್ತ್ಯಲಂಕಾರವು. ಪ್ರತಿಪಾದದಲ್ಲಿ ನ,ನ,ಮ,ಯ,ಯ,ಗಣಗಳೂ, ೮ನೆಯ ಸ್ಥಾನಗಳಲ್ಲಿ ಯತಿಯೂ ಇರುವುದರಿಂದ ೧೫ನೆಯ ಅತಿಶಕ್ವರೀ ಛಂದಸ್ಸಲ್ಲಿ ಹುಟ್ಟಿದ ಮಾಲಿನಿ, ಎಂಬ ವೃತ್ತವು ॥೬೪॥

ಇಂತು ಶ್ರೀ ಮಹಾಕವಿ ಕಾಳಿದಾಸ ಪ್ರಣೀತವಾದ
ಕುಮಾರಸಂಭವ ವೆಂಬ ಕಾವ್ಯದ ಎರಡನೆಯ
ಸರ್ಗದ ಕನ್ನಡಟೀಕಾತಾತ್ಪರ್ಯ ವಿವರಣೆ
ಮುಗಿದುದು.

